ಕರ್ನಾಟಕ ಸರ್ಕಾರ

# ಹಿಂಗಾರ

ಅರೆಭಾಷೆ ತ್ರೈಮಾಸಿಕ

ಸಂಪುಟ-2 ಸಂಚಿಕೆ-6 ದಿನಾಂಕ : 30.06.2018 ಕೊಡಗು ರೂ. 20/-

ಏಪ್ರಿಲ್ - ಮೇ - ಜೂನ್



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ




ಶ್ರೀಮತಿ ಪ್ರತಿಭಾ ನಂದಕುಮಾರ್‌ನವು ಮಾತಾಡ್ತಿರ್ದು



ಶ್ರೀ ಕೋಡಿ ಕುಶಾಲಪ್ಪ ಗೌಡ ಅವು ಕಂಡ್‌ಹಿಡ್ದ ಅರೆಬಾಸೆ ಲಿಪಿನ ಅವೆ ಬರೀತಿರ್ದು



ಮಡಿಕೇರಿಲಿ ನಡ್ದ ಸಾಹಿತ್ಯ ಶಿಬಿರ ಮತ್ತೆ ಸಂವಾದ ಜಂಬರನ ಅರೆಬಾಸೆ ಅಕಾಡೆಮಿ ಅಧ್ಯಕ್ಷ
ಪಿ.ಸಿ. ಜಯರಾಮನವು ಉದ್ಘಾಟನೆ ಮಾಡ್ತಿರ್ದು

# ಹಿಂಗಾರ

ಕರ್ನಾಟಕ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮಡಿಕೇರಿ



ಪ್ರಧಾನ ಸಂಪಾದಕರ್

ಶ್ರೀ ಪಿ.ಸಿ. ಜಯರಾಮ

ಸಂಪಾದಕರ್

ಶ್ರೀ ಬಾರಿಯಂಡ ಜೋಯಪ್ಪ

ಪ್ರಕಾಶಕರ್

ಶ್ರೀ ಉಮರಬ್ಬ

# ಅಧ್ಯಕ್ಷರ ಮಾತ್

ನಾವು ಅಧಿಕಾರ ತಕಂಡ್ ಆರು ತಿಂಗಳ್ ಕಳ್ತ್. ಜನವರಿ ತಿಂಗಳ್ ಸುಳ್ಯಲ್ಲಿ ಅರೆಭಾಷೆ ಸೌಹಾರ್ದ ಸಂಭ್ರಮ ಮತ್ತೆ ಅಕಾಡೆಮಿನ ಹೊಸ ಅಧ್ಯಕ್ಷರ್, ಸದಸ್ಯರಿಗೆ ಅಭಿನಂದನಾ ಸಮಾರಂಭ ನಡ್ತ್. ಮಾರ್ಚ್ ತಿಂಗಳ್‌ಲಿ ಮಡಿಕೇರಿನ ಕೊಡಗು ಗೌಡ ವಿದ್ಯಾಸಂಘದ ಸಭಾಂಗಣಲಿ ಕವನ-ಕುಂಚ-2018 ನಡ್ತ್. ಮತ್ತೆ ವೋಟು ಬಂದ್ ಎರಡು ತಿಂಗ ಕಾರ್ಯಕ್ರಮ ಮಾಡಿಕೆ ಆತಿಲ್ಲೆ.

ವೋಟು ಮುಗ್ದ ಮೇಲೆ ಜೂನ್ 17ನೇ ತಾರೀಕಿಗೆ ನಮ್ಮ ಪ್ರಾಯೋಜಕತ್ವಲಿ ಕಾರ್ಕಳ ತಾಲೂಕಿಗೆ ಮುದ್ರಾಡಿನ "ನಾಟ್ಕದೂರಿ"ಲಿ ನಮ್ಮ ತುಳುವೆರ್ ರಂಗ ಮಂದಿರಲಿ ನಡೆದ ಒಂದು ವಾರದ ರಾಷ್ಟ್ರೀಯ ನಾಟಕೋತ್ಸವಲ್ಲಿ ಸುಳ್ಯದ ಏನೇಕಲಿ ಸುಧೀರ್ ನಿರ್ದೇಶನದ "ಒಂದನೊಂದು ಕಾಲಲಿ" ನಾಟಕ ಪ್ರದರ್ಶನ ನಡ್ಸಿದ.

ಮತ್ತೆ ಜೂನ್ 24ನೇ ದಿನ ಮಡಿಕೇರಿನ ದೇವರಾಜ ಅರಸ್ ಭವನಲಿ ನಾವು, ಕೊಡವ ಅಕಾಡೆಮಿ ಮತ್ತೆ ಕೊಡಗು ಜಿಲ್ಲಾ ಲೇಖಕರ ಮತ್ತು ಕಲಾವಿದರ ಬಳಗದವು ಸೇರಿ ಸಾಹಿತ್ಯ ಶಿಬಿರ ಹಾಗೂ ಸಂವಾದ ಕಾರ್ಯಕ್ರಮ ನಡ್ಸಿದ.

ಈ ತಿಂಗ ನಾವು ನಾಲ್ಕು ಕಾರ್ಯಕ್ರಮ ಹಮ್ಮಿಕೊಂಡೊಳ. ಜುಲೈ 22ಕ್ಕೆ ಮಡಿಕೇರಿನ ದೇವಸ್ತೂರು ಗ್ರಾಮಲಿ ಕುಕ್ಕೇರ ಪಳಂಗಪ್ಪರ ಗದ್ದೆಲಿ ಆಟಿ-ನಾಟಿ ಕಾರ್ಯಕ್ರಮ ನಡ್ತ್. ಜುಲೈ 29ಕ್ಕೆ ಸುಳ್ಯದ ಕೆ.ವಿ.ಜಿ. ಲಾ ಕಾಲೇಜು ಸಭಾಂಗಣಲಿ ಅರೆಬಾಸೆ ಲಿಪಿ, ವ್ಯಾಕರಣ ಮತ್ತು ಭಾಷಾ ಸಬಲೀಕರಣ ಮತ್ತು ಪ್ರೊ. ಕೋಡಿ ಕುಶಾಲಪ್ಪ ಗೌಡರ ಕೊಡುಗೆ ಬಗ್ಗೆ ಅವಲೋಕನ ಹಾಂಗೂ ಅವ್ಕೆ ಸನ್ಮಾನ ಕಾರ್ಯಕ್ರಮ ನಡ್ತ್. ಆಗಸ್ಟ್ 5 ಕ್ಕೆ ಪುತ್ತೂರಿನ ಒಕ್ಕಲಿಗ ಗೌಡ ಸಂಘದ ಸಹಯೋಗಲಿ ಆಟಿ ಹಬ್ಬ-2018 ನಡ್ತ್. ಆಗಸ್ಟ್ 12 ಕ್ಕೆ ಸುಳ್ಯ ತಾಲೂಕಿನ ಹಾಲೆಮಜಲಲಿ ಅರೆಭಾಷೆ ಆಟಿ ಉತ್ಸವ ನಡ್ದದೆ.

ಅರೆಭಾಷೆ ಸಂಸ್ಕೃತಿ, ಸಾಹಿತ್ಯದ ಆಚಾರ-ವಿಚಾರಗಳ, ಹೊಸ ಹೊಸ ಬರಹಗಾರರ ಲೇಖನ "ಹಿಂಗಾರ"ದ ರೂಪಲಿ ನಿಮ್ಮ ಮುಂದೆ ಬಂದದೆ. ಬಾಸೆನ ಬೆಳ್ಸವಲ್ಲಿ ನಿಮ್ಮ ಸಂಪೂರ್ಣ ಸಹಕಾರ ಬಯಸ್‌ನೆ.

✍ ಶ್ರೀ ಪಿ.ಸಿ. ಜಯರಾಮ

# ಸಂಪಾದಕೀಯ

ಚುನಾವಣೆ ಕಾರಣಂದ ನೀತಿ ಸಂಹಿತೆ ಇತ್ತ್. ಹಿಂಗಾರ ಸಂಚಿಕೆ ಐದನೆದ್ ಪ್ರಿಂಟ್ ಆಗಿದ್ದರೂ ಬುಡುಗಡೆ ಆಕೆ ತಡ ಆತ್. ಹೊಸ ಸರಕಾರ ರಚನೆ ಆದ ಮೇಲೆ ಆರನೇ ಸಂಚಿಕೆ ಕೆಲ್ಸಕೆ ಕೈ ಹಾಕಿದೊ. ಈ ಸಂಚಿಕೆಲಿ ಅತ್ಯಂತ ಹಿರಿಯರಾದ ತೊಂಬತ್ನಾಲ್ಕನೇ ವರ್ಷದ ಉಗಾದಿಗೆ ಕಾಲಿರ್ಸಿದ ನಿವೃತ್ತ ಶಿಕ್ಷಕ ಶ್ರೀ ಕಟ್ರತನ ಬೆಳ್ಳಿಯಪ್ಪನವರ ಲೇಖನ ಉಟ್ಟು. ಕೆಲವು ಹೊಸಬರ ಕತೆ, ಕವನ ಈ ಸತಿ ಉಟ್ಟು. 'ಚಿತ್ರಕ್ಕೆ ಪದ್ಯದ ಮೆರುಗು ಕೊಡಿ'ತ ಒಂದ್ ಹೊಸ ಪುಟ ಉಟ್ಟು. ತುಂಬ ಜನ ಬರೆಕೆ ಸುರು ಮಾಡಿಯೊಳೊತ್ತೇಳ್ದು ಕುಸಿನ ವಿಷಯ. ಇಂದಲ್ಲ ನಾಳೆ ಅಂತವರ್‌ಂದ ಒಳ್ಳ ಬರವಣಿಗೆನ ನಿರೀಕ್ಷೆ ಮಾಡನೊ.

ನಾವೀಗ ನಡೂ ಮಳೆಗಾಲಲಿ ಒಳೊ. ಆರಿದ್ರಾ ನಕ್ಷದ ಮಳೆದ್ ಕಡೇ ಪಾದ ಲಾಯ್ಕ ಹೊಡ್ತ್. ಪುನರ್ವಸು ಮಳೆ ಮಾತ್ರ ಜಲ ಉಕ್ಕಿಸಿತ್. ಪುಷ್ಯಮಳೆ ಸನ ತನ್ನ ರಭಸನ ತೋರ್ಸಿಟು. ಭಾಗಮಂಡ್ಲ, ತಲಕಾವೇರಿಗೆಲ್ಲ ಇನ್ನೂರು ಇಂಚ್‌ನಷ್ಟ್ ಮಳೆ ಅಂದೇ ಆಗಿತ್ತ್. ಮಳೆಂದಾಗಿ ಜನ ತುಂಬ ಕಷ್ಟನಷ್ಟನ ಅನುಭವಿಸಿದೊ. ಬರೆ ಜರ್ತ್, ಮರ ಮುರ್ತ್, ಕೆಲ ಮನೆ ಕುಸ್ದ್ ಹೋತ್. ಕಂಡ ಕಂಡಲ್ಲೆಲ್ಲಾ ಜಲಪಾತ, ಹೋದ ಹೋದಲ್ಲೆಲ್ಲಾ ಜಲದ ಬುಗ್ಗೆ ಕಾಣಕ್. ಹೊಳೆ ಹತ್ತಿತ್, ಬೆಳೆ ಕರ್ಗಿತ್, ಅಡ್ಕೆ ಉದ್ರುತ್, ಕಾಪಿ ಹರಂಡಿತ್, ನೆಲ ಗುಡ್ಡಿಗ್ತ್, ಬೆಟ್ಟಲಿ ಬಿರ್ಕ್ ಕಂಡುಟು. ಮುಂದೆ ಏನಾದೆಯೋತ ಜನ ಹೆದ್ರಿಯೊಳೊ.

ವೈಚಾರಿಕ ನಿಲುವುನ ಧೀಮಂತರ್ ಶ್ರೀ ಕುಯಿಂತೋಡು ದಾಮೋದರತ್ತೇಳುವ ಪರಿಚಯ ಲೇಖನ ಈ ಹಿಂದೆನ ಸಂಚಿಕೆಲಿ ಪ್ರಕಟ ಆಗುಟು. ಸಾಧನೆಗೆ ಕಲಶ ಇಸಿದ ಹಾಂಗೆ ಆ ದಂಪತಿಗ 'ಮರಣಾನಂತರ ದೇಹದಾನ'ದಂತಹ ದಿಟ್ಟ ನಿರ್ಧಾರ ತಕಂಡ ಬಗ್ಗೆ ಶ್ರೀಮತಿ ಲೀಲಾ ದಾಮೋದರನವು ಬರ್ದೊಳೊ. ಶ್ರೀ ದಾಮೋದರ ದಂಪತಿಗ ಅಂಥಾ ನಿರ್ಧಾರ ತಕಂಡ್ ನಾಡ್‌ನ ಜನತೆಗೆ ಆದರ್ಶ ಆಗೊಳೊ. ಅವರ ಆ ಆದರ್ಶತನಕ್ಕೆ ಎಷ್ಟೇ ಕೃತಜ್ಞತೆ ಹೇಳಿರೂ ಕಮ್ಮಿನೇ. ತಮ್ಮ ಧೀಮಂತಿಕೆನ ಹಿಂಗಾರದೊಟ್ಟಿಗೆ ಹಂಚಿಕಂಡ ಆ ದಂಪತಿಗಳಿಗೆ ಧನ್ಯವಾದಗ. ಲೇಖನ ಬರ್ದ ಲೀಲಾ ದಾಮೋದರನವ್ಕೂ ಪತ್ರಿಕೆ ಋಣಿ ಆಗುಟು.

ಈ ಸತಿ ನಿವೃತ್ತ ಶಿಕ್ಷಕ, ಸರಳಜೀವಿ, ಸಾಧು ಸ್ವಭಾವದ ಕವಿ ಮನದ ಶ್ರೀ ಪಿ.ಜಿ. ಅಂಬೆಕಲ್ ಅವರ ಪರಿಚಯ ಲೇಖನ ಉಟ್ಟು.

✍ ಶ್ರೀ ಬಾರಿಯಂಡ ಜೋಯಪ್ಪ.

# ಹಿಂಗಾರ ಒಡ್ಸ್‌ಕನ

# ಪ್ರಾರ್ಥನೆ

ವೆಂಕಟೇಶನೆ ಕೈಯ್ಯ ಮುಗ್‌ದವೆ
ಒಂದೆ ಮನಸ್‌ಲಿ ನಿಂಗೆನೇ
ನಿನ್ನ ಭಕ್ತರ ಕಾಯೊಕೆಂದ್‌ದ್
ತುಂಬು ಮಮತೆಲಿ ಬೇಡುವೇ ॥ ೧ ॥

ಹದಿನೆಂಟ್ ಗೋತ್ರದ ಹತ್ತ್ ಕುಟುಂಬದ
ಎಲ್ಲ ಮಕ್ಕಳ್ ಸೇರಿದ್
ಕೂಡಿ ಹಾಕಿದ್ ಬೆರೆತ್ ಎಲ್ಲೊವು
ನಿನ್ನ ನೆನೆಸ್‌ತ ಬೇಡುವೆ ॥ ೨ ॥

ಕಾರ್ಯ ಮುಟ್ಟುವೆ ವಿಘ್ನ ಕೊಡದೆನೆ।
ತಳ್ಳಿ ಹಾಕದೆ ರಕ್ಷಿಸ್ ।
ಕಾಯೊಕಪ್ಪನೆ ಕುಲದ ದೇವನೆ
ಅಳ್ದ್ ಹೋಗದೆ ಇರೊಕುತ
ಇಂದ್ ಮುಂದೆಯು ಮತ್ತು ಎಂದಿಗೂ
ನಿನ್ನ ಅನುಗ್ರಹ ಬೇಕುತ ॥ ೩ ॥

✍ 'ಮಾಲಾಗೌ'

ಎಂ. ಲಕ್ಷ್ಮಣ ಗೌಡ
ಮಾಯಿಪನ ಮನೆ,
ಮಡಪ್ಪಾಡಿ ಗ್ರಾಮ ಮತ್ತು ಅಂಚೆ,
ಸುಳ್ಯ ತಾಲೂಕು.



ವ್ಯಕ್ತಿ ಪರಿಚಯ

# ಕವಿ ಮನದ ಸರಳ ಜೀವಿ

## ಶ್ರೀ ಪಿ.ಜಿ. ಅಂಬೆಕಲ್

ಶ್ರೀ ಪುಟ್ಟಣ್ಣಗೌಡ ಅಂಬೆಕಲ್ ಅವು ಸುಳ್ಯದ ದಿ. ವೆಂಕಪ್ಪ ಗೌಡ ಮತ್ತೆ ದಿ. ರಾಮಕ್ಕ ದಂಪತಿಗಳ ಮಂಙ. ಇವು 21-07-1944 ರಂದ್ ಸುಳ್ಯ ತಾಲೋಕು ಅಮರ ಮೂಡ್ನೂರು ಗ್ರಾಮದ ಪೈಲಾರ್‌ತ್ತೇಳುವಲ್ಲಿ ಹುಟ್ಟಿದೊ. ಪುಟ್ಟಣ್ಣಗೌಡ ಅಂಬೆಕಲ್‌ತ ಹೇಳ್ರೆ ಅದ್ಯಾರಪ್ಪಾತ ಹಂಙಾ ಆಚೆ ಈಚೆ ನೋಡಿಕಾದೆ. ಆದರೆ ಪಿ.ಜಿ. ಅಂಬೆಕಲ್‌ತ ಹೇಳ್ರೆ ಪಟ್ಟತ ಗೊತ್ತಾದೆ. ಜನಮಾನಸಲಿ ಪಿ.ಜಿ. ಅಂಬೆಕಲ್ ಪ್ರಸಿದ್ಧ ಹೆಸ್ರ್.

ಅಂಬೆಕಲ್ ಅವು ಇಂಟರ್‌ಮೀಡಿಯಟ್ ಶಿಕ್ಷಣನ ಭೂಪಾಲ್‌ಲಿ ಆಂಗ್ಲ ಮಾಧ್ಯಮಲಿ ಓದಿದೊ. ಕರ್ನಾಟಕ ವಿಶ್ವವಿದ್ಯಾನಿಲಯಲಿ ಬಿ.ಎ. ಪದವಿನ ಪಡ್ದೊ. ಮೈಸೂರ್‌ನ ರೀಜನಲ್ ಕಾಲೇಜ್ ಆಫ್ ಎಜುಕೇಶನ್ ಸಂಸ್ಥೆಲಿ ಬಿ.ಇಡಿ., ಪದವಿನ, ಮೈಸೂರ್‌ನ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಲಿ ಎಂ.ಎ., ಪದವಿನ ಪೂರೈಸಿದೊ. ಈ ನಡುವೆ ವಿಟ್ಲದ 'ವಿಟ್ಲ ಪದವಿ ಪೂರ್ವ ವಿದ್ಯಾಲಯ'ಲಿ ಮತ್ತೆ ವಿಟ್ಲ ಬಾಲಿಕಾ ಪ್ರೌಢ ಶಾಲೆಲಿ ಐದ್ ವರ್ಷ ಮುಟ್ಟ ಗುಮಾಸ್ತನಾಗಿ ದುಡ್ದೊಳೊ.

ಮಡಿಕೇರಿ ತಾಲೂಕ್‌ನ ಚೆಟ್ಟಳ್ಳಿ ಪ್ರೌಢಶಾಲೆಲಿ ಕನ್ನಡ ಭಾಷೆಯ ಸಹಾಯಕ ಶಿಕ್ಷಕನಾಗಿ ಮತ್ತೆ ಅದೇ ಇಸ್ಕೂಲ್‌ಲಿ 8 ವರ್ಷ ಮುಖ್ಯ ಶಿಕ್ಷಕನಾಗಿ ಹಿಂಗೆ ಒಟ್ಟು 33 ವರ್ಷ ಕಾಲ ಸೇವೆ ಸಲ್ಲಿಸಿದ ಅವು 2002 ರ ಜುಲೈ 31 ರಂದ್ ವಯೋನಿವೃತ್ತಿ ಹೊಂದಿದೊ.

ಅಂಬೆಕಲ್ ಅವರ ಹೆಣ್ಣ್ ಶ್ರೀಮತಿ ಕೆ.ಕೆ. ಕನಕಾಂಗಿ. ಅವ್ ಪ್ರಾಥಮಿಕ ಇಸ್ಕೂಲ್‌ಲಿ ಶಿಕ್ಷಕಿಯಾಗಿದ್ದೊ. ಈ ದಂಪತಿಗಳಿಗೆ ಡಾ॥ ನಿವೇದಿತಾ, ಅಲಕಾ ಮತ್ತೆ ಜಾಹ್ನವಿತ ಮೂರ್ ಮಕ್ಕ. ನಿವೇದಿತಾ ಆಯುರ್ವೇದ ವೈದ್ಯ ಓದಿ ಈಗ ಸ್ವಂತ ಕ್ಲಿನಿಕ್ ನಡಸ್ತಾ ಒಳೊ. ಅಲಕಾ ಬಿ.ಬಿ.ಎಂ., ಎಂ.ಬಿ.ಎ., ಓದಿಕಂಡ್ ರೆವಿನ್ಯೂ ಇಲಾಖೆಲಿ ಸರಕಾರಿ ಉದ್ಯೋಗಸ್ಥೆ. ಜಾಹ್ನವಿ-ಎಂ.ಎಸ್ಸಿ., ಬಯೋಟೆಕ್,

ಓದಿಕಂಡ್ ಈಗ ಜರ್ಮನ್ ಕಂಪೆನಿಲಿ Team leader for R & D Microbiology for Sartorius stadium Biotech India Pvt Ltd. Scientist-1 ತ ಉದ್ಯೋಗ ಮಾಡ್ತೊಳೊ.

ಹೆಣ್ಣ್ ಶ್ರೀಮತಿ ಕನಕಾಂಗಿ ಕಥೆಗಾರ್ತಿ. ಸಾಹಿತ್ಯ ವಲಯಲಿ 'ಕನಕ ಅಂಬೆಕಲ್'ತ ಹೆಸ್ರ್ ಪಡ್ದವು. ಅವು ಇಂದಿಲ್ಲೆ. ಮಕ್ಕಳ ಅಭಿವೃದ್ಧಿನ ಕಂಡತ್ತೇಲೆ. ಕಣ್ಣೊಳಗೆ ಕುದ್ದೊಳೊ, ಅಷ್ಟೆ.

ಪಿ.ಜಿ. ಅಂಬೆಕಲ್ ಅವು ಶಿವರಾಮಕಾರಂತರ ಒಡನಾಡಿಯಾಗಿದ್ದವು. ಒಮ್ಮೆ ಚೆಟ್ಟಳ್ಳಿ ಇಸ್ಕೂಲಿಗೆ ಕಾರಂತರ್ ಬಂದಿದ್ದೊತ ಅಂದ್‌ನ ದಿನನ ನೆಂಪು ಮಾಡಿಕಂಡವೆ. ಶ್ರೀಯುತರ್ ಕೊಡಗು ಲೇಖಕ ಮತ್ತೆ ಕಲಾವಿದರ ಬಳಗದ ಸದಸ್ಯನಾಗಿ, ಕಾರ್ಯದರ್ಶಿಯಾಗಿ, ಪ್ರಧಾನ ಕಾರ್ಯದರ್ಶಿಯಾಗಿ, ಜಿಲ್ಲಾ ಸಂಚಾಲಕನಾಗಿ, ಕಾರ್ಯಾಧ್ಯಕ್ಷನಾಗಿ ಹಿಂಗೆ ಸುಮಾರ್ ಹದ್ನೈದ್ ವರ್ಷ ಕಾರ್ಯ ನೀಸಿಯೊಳೊ.

ಅಂಬೆಕಲ್ ಅವು ಓರ್ವ ಪ್ರತಿಭಾವಂತ ಶಿಕ್ಷಕ, ಕಲಾರಾಧಕ. ನಟನಾ ಕೌಶಲ್ಯ ಅವರ್ಲಿ ಇತ್. ಅವು ಶಾಲಾಭಿವೃದ್ಧಿಗಾಗಿ ನಾಟಕವೊಂದರ ಮುಖ್ಯ ಪಾತ್ರಧಾರಿಯಾಗಿದ್ದೊ. ಆ ನಾಟಕದ ಹೆಸ್ರ್ 'ಹುಚ್ಚ'. ಅದರ ಶಾಮಣ್ಣತ್ತೇಳುವ ಹೆಸ್ರ್‌ನ ಮುಖ್ಯ ಪಾತ್ರವೇ ಅವರ್ದ್. ಆ ನಾಟಕಂದ ಬಂದ ಹಣಂದ ಇಸ್ಕೂಲ್‌ಗೆ ಧ್ವನಿವರ್ಧಕ ಮತ್ತೆ ಪ್ರೊಜೆಕ್ಟರ್ ತಕಂಬಕಾತ್. ಇನ್ನೊಂದು ನಾಟಕ 'ಸಮಯಕ್ಕೊಂದು ಸುಳ್ಳು.' ಅದರ್‌ಲಿ ಸುಳ್ಳುಗಾರನ ಪಾತ್ರ ಅಂಬೆಕಲ್ ಅವರ್ದಾಗಿತ್. ಇತರ ಪಾತ್ರಧಾರಿಗ ಅದೇ ಇಸ್ಕೂಲ್‌ನ ಮೂರ್ನಾಕ್ ಮಾಸ್ಟ್‌ಗ. ಈ ತಂಡ ಸಿದ್ದಾಪುರ ಹಿಂಗೆ ಬೇರೆ ಬೇರೆ ಕಡೆ ಗಣೇಶೋತ್ಸವದ ಸಂದರ್ಭಲಿ ನಾಟಕ ಆಡಿಯೊಳೊ. ಇವರ ಇಸ್ಕೂಲ್‌ನ ಸಾಂಸ್ಕೃತಿಕ ಸಂಘಲಿ ಉಳ್ಸಿಕಂಡ್ ಬಂದ ಹಣಂದ ಟಿ.ವಿ., ಅದರ ಸ್ಟ್ಯಾಂಡ್ ಮತ್ತೆ ಸಿ.ಡಿ. ತಕ್ಕೊಂಡೊ.

ಇಸ್ಕೂಲ್‌ನ ಇತಿಹಾಸಲೇತ್ತೇಳುವಂಗೆ 2002ರ್‌ಲಿ ಎಸ್.ಎಸ್.ಎಲ್.ಸಿ.ಲಿ ಇಬ್ಬರ್ ಮಕ್ಕ ಅತ್ಯುನ್ನತ ದರ್ಜೆಲಿ ಪಾಸಾಗೊಳೊ. ಈ ಇಸ್ಕೂಲ್‌ಲಿ ಸರಾಸರಿ ಶೇ. 90 ಫಲಿತಾಂಶ

ಬರ್ತಿತ್. ಅದ್ಕೆಲ್ಲ ಎಲ್ಲಾ ಗುರುಗಳ ಶ್ರಮದ ಫಲತ ಹೇಳುವ ಅವು ವ್ಯಷ್ಟಿಗಿಂತ ಸಮಷ್ಟಿಯೇ ಮುಖ್ಯತ ಹೇಳಿವೆ.

ಶಿಕ್ಷಕ ಪ್ರಶಸ್ತಿಗೆ ಅರ್ಜಿ ಹಾಕಿತ್ತೇಳ್ರೂ ಅರ್ಜಿ ಹಾಕದೆ ಅಲ್ಲಿ ಶಿಕ್ಷಕರಾಗಿದ್ದ ಸಿನೇತ ಜಗನ್ನಾಥನವ್ಕೆ ಅರ್ಜಿ ಹಾಕ್ಸಿದೊ. ಅವ್ಕೆ 'ಉತ್ತಮ ಶಿಕ್ಷಕ' ಪ್ರಶಸ್ತಿ ಸಿಕ್ತ್. ಅಂಬೆಕಲ್ ಅವ್ಕೆ ಕುಸೀ ಆತ್. ಬರವಣಿಗೆ ತುಡಿತ ಇದ್ದ ಅಂಬೆಕಲ್ ಅವು 1986ರ್‌ಲಿ ಜಿಲ್ಲಾ ಮಟ್ಟದ ಕಥಾ ಸ್ಪರ್ಧೆಗೆ ಕತೆ ಕಳ್ಸಿದೊ. ಪಿ.ಜಿ.ಯವ್ಕೆ ಒಂದನೇ ಇನಾಮು ಬಾತ್. ಈ ಸ್ಪರ್ಧೆನ ಕೊಡಗ್‌ನ ರೋಟ್ರ್ಯಾಕ್ಟ್ ಸಂಸ್ಥೆಯವ್ ಆಯೋಜಿಸಿದ್ದೊ. 'ಹೊಸದಿಗಂತ' ಪತ್ರಿಕೆಲಿ 'ತಬ್ಬಲಿಯು ನೀನಾದೆ ಮಗನೆ'ತ್ತೇಳುವ ಕಥೆ ಬರ್ದೊಳೊ. ಕೊಡಗಿನ ಗೌರಮ್ಮ ಸ್ಮಾರಕದವು 1991ರ್‌ಲಿ ಅವರ್ನ 'ಉತ್ತಮ ಕಥೆಗಾರ'ತ್ತೇಳಿ ಆಯ್ಕೆ ಮಾಡ್ದೊ. 1991ರ್‌ಲಿ 'ಕನ್ನಡ ಮಾಧ್ಯಮ ಸ್ಥಿತಿಗತಿ ಹಾಗೂ ಸುಧಾರಣೆ–ಮಾರ್ಗೋಪಾಯ'ತ್ತೇಳುವ ರಾಜ್ಯಮಟ್ಟದ ಪ್ರಬಂಧ ಸ್ಪರ್ಧೆಲಿ ಅವ್ಕೆ ಮೆಚ್ಚುಗೆ ಬಹುಮಾನ ಸಿಕ್ಕುಟ್ಟು. 1997ರ್‌ಲಿ ಸಿದ್ಧಾಪುರದ ಲಯನ್ಸ್ ಕ್ಲಬ್‌ನವು ಶ್ರೀಯುತರ್ನ ಸನ್ಮಾನಿಸಿ ಗೌರವಿಸಿಯೊಳೊ. 2002ರ್‌ಲಿ ಶಿವರಾತ್ರಿ ಉತ್ಸವದಂದ್ ಸೋಮವಾರಪೇಟೆ ತಾಲೂಕು ಮಜ್ದೂರ್ ಸಂಘದವು ಸನ್ಮಾನ ಮಾಡ್ಯೊಳೊ.

ಕೊಡಗು ಜಿಲ್ಲಾ ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಸಂಘಲಿ ಕಾರ್ಯಕಾರಿ ಸಮಿತಿಯಲ್ಲಿದ್ದೊ. ಒಂದ್ ವರ್ಷ ಅದರ ಕಾರ್ಯದರ್ಶಿಯಾಗಿಯೂ ಸೇವೆ ಮಾಡಿಯೊಳೊ.

ಇಸ್ಕೂಲ್ ಆಡಳಿತ ಮಂಡಳಿಯೊಟ್ಟಿಗೆ ಅವರ್‌ದ್ ಅನ್ಯೋನ್ಯ ಸಂಬಂಧ. ಆಡಳಿತ ಮಂಡಲಿ ಇಸ್ಕೂಲ್‌ನ ಒಳಾಡಳಿತಲಿ ಒಳಗೆ ಬಾತಿತ್ಲೆ. ಮಕ್ಕಳ ದಾಖಲಾತಿ ಸಮೆಲಿ ಇವ್ಕೆ ಸೀಟ್ ಕೊಡಿ ಅವ್ಕೆ ಸೀಟ್ ಕೊಡಿತ ಅವರ ಮೇಲೆ ಒತ್ತಡ ತಾದಾಗಲಿ, ಹೊರಗಿನ ಬೇರೆ ಬೇರೆ ಕೆಲ್ಸ ಮಾಡಿತ ಹೇಳ್ದಾಗಲಿ ಮಾಡದೆ ಬಾಕಿ ಅಭಿವೃದ್ಧಿ ಕೆಲ್ಸಗಳ್ನ ಆಡಳಿತ ಮಂಡಲಿಯವೇ ಮಾಡ್‌ತಿದ್ದೊ. ಪಾಠ ಮಾಡ್ದಷ್ಟೇ ಶಿಕ್ಷಕರ ಕೆಲ್ಸ ಆಗಿತ್ತ್. ಅನಗತ್ಯ ಕಿರಿಕಿರಿ ಮಾಡ್ತಿತ್ಲೆತ ಅಂದ್‌ನ ದಿನಗಳ ಗ್ಯಾನ ಮಾಡಿಕಂಡವೆ.

ತಿಳಿ ಮನ್ಸ್‌ನ ಅವು ನಿವೃತ್ತಿ ಆದ್ ಜುಲ್ಯೆ 31ಕ್ಕೆ. ಜುಲೈ 30 ರಂದು ಪಾಠ ಮಾಡ್ದವ್. 'ನಿವೃತ್ತಿ ದಿನನೂ ಪಾಠ ಮಾಡೊಕುತ್ತಿದ್ದೆ. ಆದರೆ ಅಂದ್, ಸನ್ಮಾನ, ಬೀಳ್ಕೊಡುಗೆತ ಇತ್ತಲ್ಲ ಹಂಗಾಗಿ ಪಾಠ ಮಾಡಿಕೆ ಆತ್ಲೆ'ತ ಹೇಳ್ದ ಅಂಬೆಕಲ್

ಅವರ್‌ಲಿ ಹಂಙಾನೂ ಅಹಂ ಇಲೆ. ನಿವೃತ್ತಿ ಆದ ಮೇಲೆ ಪಾಠಕ್ಕೆ ಬನ್ನಿತ ಕರ್‌ದ್ದರೆ ಹೋತಿದ್ದರಾತ ಕೇಳ್ರೆ 'ಓ ! ನನ್ನಲ್ಲಿ ಇನ್ನೂ ಹುಮ್ಮಸ್ ಇತ್ತ್. ನಂಗೆ ಶಿಕ್ಷಕ ವೃತ್ತಿ ತುಂಬಾ ಕುಸಿ'ತ ತನ್ನ ವೃತ್ತಿನ ತಬ್ಬಿಕಂಡವ್. ಕೇವಲ ಸಂಬಳಕ್ಕಾಗಿ, ಕಾಲ ಕಳೆಕಾಗಿಯಷ್ಟೇ ಉದ್ಯೋಗಕೆ ಬರವ್ ಇಸ್ಕೂಲಿಗೆ ಕಾಲ್ ಹಾಕಿಕೆ ಬತ್ತ್‌ತ ಹೇಳ್ತಿದ್ದೊ.

ಕೆಲ್ಸ ಇಲ್ಲದವ್ಕೆ ಶಿಕ್ಷಕ ವೃತ್ತಿತ ಹೇಳಿವೆಯಲ್ಲ, ಅಂಥವರ ಬಗ್ಗೆ ಏನ್ ಹೇಳ್ರೆತ ಕೇಳ್ರೆ 'ಹೇಳವ್ ಹೇಳಲಿ ಬುಡಿ. ಅತ್ಯಂತ ಪವಿತ್ರವಾದ ಸ್ಥಾನ ಎರಡ್. ಒಂದ್ ಶಿಕ್ಷಕ ಸ್ಥಾನ, ಇನ್ನೊಂದ್ ವೈದ್ಯ ಸ್ಥಾನತ ಅವ್ ವೃತ್ತಿ ಗೌರವನ ಎತ್ತಿ ಹಿಡ್ದವೆ.

ಪಾಠ ಬೋಧನೆಯೊಟ್ಟಿಗೆ ಅದ್ಕೆ ಸಂಬಂಧಪಟ್ಟಂಗೆ ಪೂರಕ ವಿಚಾರಗಳ್ನ ಮಕ್ಕಳಿಗೆ ಹೇಳಿ ಕೊಡೊಕು. ಸಾಹಿತ್ಯ ಕೃತಿಗಳ ಶಿಕ್ಷಕರ್ ಓದೊಕು. ದುಶ್ಚಟಗಳ್‌ಂದ ದೂರ ಇರೊಕು. ತಮ್ಮ ದೌರ್ಬಲ್ಯನ ಮಕ್ಕಳ ಮುಂದೆ ಹೇಳಿಕಂಬಕಾಗದ್‌ತ ಶ್ರೀಯುತರ್ ಕೆಮಿ ಮಾತ್ ಹೇಳಿವೆ.

ಅಂಬೆಕಲ್ ಅವು ತುಂಬಾ ಕುಸಿಪಟ್ಟ್ ಹಿಂಗಾರಕ್ಕೆ ಕತೆ ಬರ್ದ್ ಕಳ್ಸಿಯೊಳೊ. "ಅಪ್ಪನ ಆಸ್ತಿ..... ಅಪ್ಪನೇ"ತ ಕತೆ. ತುಂಬಾ ಒಳ್ಳ ಬರಹಗಾರತ ಆ ಕತೆನ ಓದಿರೆ ಗೊತ್ತಾದೆ. ಅವರ್ನ ನಮ್ಮ ಸಮಾಜ ಗುರ್ತ್ ಮಾಡಿ ಬೆನ್ನ್ ತಟ್ಟಿದ್ದರೆ ಅವರ ಸಾಹಿತ್ಯ ಕೃಷಿ ತುಂಬಾ ಫಸಲ್ ಕೊಡ್ತಿತ್. ಈಗ ಮಕ್ಕಳೊಟ್ಟಿಗೆ, ಪಿಳ್ಳಿಕಳೊಟ್ಟಿಗೆ ಬೆಂಗಳೂರ್‌ಲಿ ವಾಸ ಮಾಡ್ತಾ ಒಳೊ. ಇದೀಗ ಅವ್ಕೆ ಎಪ್ಪತ್ತೈದರ ವಸಂತ ಕಾಲ. ಅವರ್‌ಂದ ಸಾಹಿತ್ಯಕ್ಕೆ ಒಳ್ಳ ಕೊಡಗೆ ಸಿಕ್ಕಲಿತ್ತೇಳ್ದು ನಮ್ಮ ಬಯಕೆ. ಅವ್ಕೆ ಶುಭಾಶಯಗ.

✍ ಶ್ರೀ ಬಾರಿಯಂಡ ಜೋಯಪ್ಪ.

*ಪುಸ್ತಕ ಮುಂದಿನ ಪೀಳಿಗೆನ ಆಸ್ತಿ.*
*ಸಾಹಿತ್ಯಕ್ಕೆ ಸಾವಿಲ್ಲ.*

## ಕತಾ ಜೊಂಪೆ

# ಅಪ್ಪನ ಆಸ್ತಿ......ಅಪ್ಪನೇ.......!?

ಬಲ್ದ ಪುಡೆಂದ ಎದ್ದ ಸೋಮಯ್ಯ ಮಾಸ್ಟ್ರ ತಮ್ಮ ಎರಡ್ ಅಂಗೈಗಳ ಜೋಡ್ಸಿ ನೋಡಿಕಂಡ್ 'ಕರಾಗ್ರೆ ವಸತೇ ಲಕ್ಷ್ಮೀ ಕರಮಧ್ಯೆ ಸರಸ್ವತೀ'ಂತ ಹೇಳುವ ಸ್ಲೋಕನ ಹೇಳಿ ಕಟ್ಲ್‌ಂದ ಮೆಲ್ಲೆ ಎದ್ದ್, ಅವ್ ಹೊದ್‌ಕಂಡಿದ್ದ ಕಂಬಳಿ, ಒಲ್ಲಿಗಳ ಮಡ್‌ಚಿಕಂಡ್‌ಇರ್‌ಕನ ಬಾಡೆಂದ ಸಣ್ಣ ಮಕ್ಕಳ ಆಟ ನೆಗೆ, ಮಾತ್‌ಕತೆ ಕೇಳ್‌ತ್. ಆಗ ನೆನ್ನೆತಾನೆ ತನ್ನ ಮಕ್ಕ ಪಿಳ್ಳಿಕ ಎಲ್ಲಾ ಬಂದದ್ ಗೇನಬಾತ್.

ದೊಡ್ಡ ಬಾಡೆ, ಅದ್ಕೆ ಸರಿಯಾದ ಐಮರ, ನಾಲ್ಕ್ ದೊಡ್ಡ ದೊಡ್ಡ ಕೋಂಬರೆನ ಹಳೇ ಮನೆಲಿ ಒಂಟಿ ದೆವ್ವದಾಂಗೆ ಏಳೆಂಟ್ ವರ್ಸಂದ ಇದ್ದ ಸೋಮಯ್ಯ ಮಾಸ್ಟ್ರಿಗೆ ಮನೆ ಇಂದ್ ಪೂರಾ ಎತ್ಯಾಸ ಆದಂಗಾಗಿ ತನ್ನ ಮನೆನೇ ಹೊವ್ದೊ ಅಲ್ಲೋಂತ ಕಾಂಬಾಂಗೆ ಆತ್. ಮುಕ್ಕಾಲ್ ಸೆಂಚುರಿ ಬಾರ್‌ಸಿಕೆ ನಿತ್ತ ಸೋಮಯ್ಯ ಮಾಸ್ಟ್ರಿಗೆ ಈಗ ಮನೇಲಿ ಅತ್ತ ಇತ್ತ ಹೋಕೆ ಮೂರನೇ ಕಾಲ್ ಬೇಕಾದೆ. ಕಣ್ಣ್ ಸರಿ ಕಾಂಬೊಲ್ಲೆ, ತನ್ನ ಮನೆ ಆದರ್‌ಂದ ನೆಂಪುಲಿ ಓಡಾಡುವೆ. ಹಾಂಗೆ ಈಚೆ ಕೋಂಬರೆಗೆ ಬಾಕನ ಚೆಂಡೋ ಗೊಂಬೆನೋ ಏನೇನೊ ಮಕ್ಕಳ ಆಟದ ಸಾಮಾನ್‌ಗ ಕಾಲಿಗೆ ಸಿಕ್ಕಿತ್. ಹಾಂಗೂ ಹೀಂಗೂ ಮೆಲ್ಲೆ ಬಾತ್‌ರೂಮಿಗೆ ಹೋಗಿ ತನ್ನ ಬೊಳ್ಪುನ ಕೆಲ್ಸಗಳ ಮುಗ್ಸಿ ಬಂದ್ ಬಾಡೆಲಿ ತಾನ್ ಯಾಗೊಳು ಕುದ್ರುವ ಬೆತ್ತದ ಕುರ್ಚಿಲಿ ಕುದ್ದದೇ ಗೊತ್ತ್, ದೊಡ್ಡ ಸೊಸೆ ಬಿಸಿ ಬಿಸಿ ಕಾಪಿ ತಂದ್ ಕೊಟ್ಟತ್. ಜೋರು ಚಳಿ ಇರ್‌ಕನ ಮಾತ್ರ ಕಷ್ಟಲಿ ಕಾಪಿ ಕಾಸಿ ಕುಡೀತಿದ್ದ ಮಾಸ್ಟ್ರಿಗೆ ಇಂದ್ ಸೊಸೆ ಕೊಟ್ಟ ಕಾಪಿಲಿ ಹೊಸ ರುಚಿ ಕಂಡತ್. ಹೀಂಗೆ ನಂಗೆ ಯಾಗೊಳು ಸಿಕ್ಕಿರೆ ಎಷ್ಟ್ ಲಾಯಿಕ್ ಇತ್ತ್‌ಂತ ಮಾಸ್ಟ್ರ ಮನ್‌ಸ್‌ಲೇ ಗ್ರೇಸಿಕಂಡೊ. ಯಾಗೊಳಾದರೆ ತನ್ನ ಕಾಪಿ ತಿಂಡಿ ಹೊತಾರೆ ಒಂಬತ್ತುವರೆ-ಹತ್ತ್‌ಗಂಟೆಗೆ. ಎಂಟುವರೆ-ಒಂಬತ್ತಕ್ಕೆ ತೋಟ ಕೆಲ್ಸಕ್ಕೆ ಬಾವ ಅಕ್ಕು ಹೆಂಗ್ಸ್ ಉಪ್ಪಿಟ್ಟೊ, ಅವ್‌ಲಕ್ಕಿನೊ ಮಾಡಿ ಕೊಟ್ಟದೆ. ಕುಸಿಯಾದ್ರೆ ಒವ್ಮೊಮ್ಮೆ ದೋಸೆನೊ ರೊಟ್ಟಿನೊ ಮಾಡ್ದೂ ಉಟ್ಟು. ಕಾಪಿ ತಿಂಡಿ ಮಾಡಿ, ಮನೇನ ಗುಡ್‌ಸಿ, ಒರ್‌ಸಿ, ಮದ್ಯಾನ್ನದ ಅಡಿಗೆ ಮಾಡ್ದೆ. ಮದ್ಯಾನ್ನ ಉಂಡ್ ಒಳ್‌ದದ್ದ್ ಕತ್ತಲೆಗೆ. ಉಣಕೂಂತ ಕಂಡರೆ ಬಿಸಿ ಮಾಡಿ ಉಂಬೊದು, ಇಲ್ಲರೆ ಅಂದ್ ಏಕಾದಸಿ!?

ಅಮೆರಿಕಾ, ಸಿಂಗಾಪುರಲಿ ಇರುವ ಮಂಜಂದರ್ ಮನೆ ಕಡೆ ತಲೆ ಮಡ್‌ಗದೆ ಐದಾರ್ ವರ್ಸ ಕಳ್ದ್. ಇಸ್ಟ್ ವರ್ಸ ಹೆಪ್ಪುಕಟ್ಟಿಕಂಡಿದ್ದ ಮೌನ ಮೆಲ್ಲೆ ಕರ್‌ಗಿದಾಂಗೆ ಕಂಡದೆ. ಹಿಂಗೆ ಯಾಗೊಳು ಇದ್ದರೆ ಎಸ್ಟ್ ಲಾಯಿಕಿತ್ತ್‌ಂತ

ಮಾಸ್ತ್ರಿಗೆ ಕಂಡದೆ. ಪಿಳ್ಳೆಕಳ ಆಟ ಬೊಬ್ಬೆ ನಗೆನೊಟ್ಟಿಗೆ ಯಾರ್‍ದೊ ಮಾತ್ ಕೇಳ್ದಾಂಗೆ ಆಗಿ ಮಗೊಳ್ ಬಾತೇನೊಂತ ಕುಸಿಲಿ 'ಪೂವೀ'ಂತ ಕರ್‌ದರೆ ಎರ್‌ಡ್ನೇ ಮಂಜ ಗಪ್ಪು 'ಏನಪ್ಪ ತಂಗೆನ ಕರ್‌ದರೆ ಅವ್‌ಳೆಲ್ಲಿ ಬಂದುಟು'ಂತ ಕೇಳ್ತ್. ಓ ಮಗೊಳು ಬಾತ್‌ಲೇಂತ ಮಾಸ್ತ್ರ ಮೋರೆ ಚಪ್ಪೆ ಆತ್. ಆದ್ರೆ ಮಂಜನ ಅಮೆರಿಕ ಕಂಪೆನಿ, ಕೆಲ್‌ಸಗಳ ಇಚಾರ ಕೇಳ್ದೊ. ಈ ಪರ್ದೇಸಿ ಕಂಪೆನಿಗ ಕೆಲವರ್ನ ಮನೆಗೆ ಕಳ್‌ಸ್‌ತ್ತಾ ಒಳಗಡ, ನಿಂಗೆ ಏನೂ ತೊಂದರೆ ಇಲ್ಲೇಲಂತ ಕೇಳ್ದೊ. ಅಪ್ಪನ ಪ್ರಸ್ನೆಗೆ ಮಂಜ ನಂಗೇನೂ ಆಕಿಲ್ಲೆಂತ ಕಾಟಾಚಾರಕ್ಕೆ ಉತ್ತರ ಕೊಟ್ಟ್ ಅವನ ಕೋಂಬರೆಗೆ ಹೋತ್. ಮನೆ ತುಂಬ ಪಿಳ್ಳೆಕಳ ಆಟ ಬೊಬ್ಬೆ ನೆಗೆ, ಮಂಜ ಸೊಸೆಕಳ ಮಾತ್‌ಕತೆ ಕೇಳ್‌ತನೇ ಇತ್ತ್.

ತನ್ನ ಒಬ್ಬಳೇ ಒಬ್ಬೊಳು ಮಗೊಳ್ ಪೂವಮ್ಮ ಇನ್ನೂ ಯಾಕೆ ಬಾತ್‌ಲೆಂತೇಳುವ ಪ್ರಸ್ನೆ ಅಜ್ಜನ ಮನ್‌ಸ್‌ಲಿ ಕೊರಿತಾಯಿತ್ತ್. ಏಳ್ ವರ್ಸಗಳ ಹಿಂದೆ ಈ ನನ್ನ ಮಕ್ಕಳ ಅಮ್ಮ ಈ ಲೋಕ ಬುಟ್ಟ್ ಹೋದ ದಿನಗಳ ನೆನ್‌ಪಾತ್. ತನ್ನ ಮಂಜಂದರ ಮೇಲೆ ಮಡ್‌ಗಿರೆ ಕಕ್ಕೆ ಕಚ್ಚಿಕಂಡ್ ಹೋದು, ಕೆಳ್ಗೆ ಮಡ್‌ಗಿರೆ ಪಿಜಿನ್ ಹೊರುದೂಂತ ಅಸ್ಟ್ ಪ್ರೀತೀಂದ ಮುತ್ತು, ರತ್ನಂತ ತನ್ನ ಪ್ರಾಣಕ್ಕಿಂತಲೂ ಹೆಚ್ಚಿನ ಪ್ರೀತಿಲಿ ಸಾಂಕಿ ಸಲಹಿದ ಅಮ್ಮ ಸಾಯಕನ ಇಬ್ಬೊರು ಮಂಜಂದರೂ ಹಕ್ಕಲೆ ಇತ್ತ್‌ಲೆ. ಅಮ್ಮ ಇನ್ನ್ ಹೆಚ್ಚ್ ಸಮೆ ಇಲ್ಲೆ, ಒಮ್ಮೆ ಬಂದ್ ನೋಡಿಕಣೀಂತ ಪೋನ್ ಮಾಡ್ರೆ, ಈಗ ಬಂದರೆ ನಾವೇ ನಮ್ಮ ಕರ್ಚಿ ಹಾಕೊಂಣೊಕಾದೆ, ಬರುವ ವರ್ಸ ಬಂದವೆ, ಆಗ ಕಂಪೆನಿ ಕರ್ಚಿಲೇ ಬರಕ್‌ಂತ ದುಡ್ಡ್‌ನ ಮೋರೆ ನೋಡ್ದೊ. ಮಕ್ಕಳಿಗಾಗಿ ರಾತ್ರಿ ಬೊಳ್ಳು ಜೀವ ಸಮ್‌ದ ಅಮ್ಮನ ಮೋರೆ ನೋಡೊನೋಂತ ಮಂಜಂದರಿಗೆ ಅನ್‌ಸಿತಿಲ್ಲೆ. ಅಮ್ಮ ಹಾಸಿಗೆ ಹಿಡ್‌ದದ್ ಗೊತ್ತಾದಾಂಗೆ ಓಡೋಡಿ ಬಂದದ್ ಮಗಳ್ ಪೂವಿ. ಅಮ್ಮ ಆಸ್ಪತ್ರೆಲಿ ಇರ್‌ಕನಮುಟ್ಟ ತಿಂಗಳಗಟ್ಲೆ ಕಾಲೇಜಿಗೆ ರಜೆ ಹಾಕಿ ಸೇವೆ ಮಾಡ್ತ್. ಆದರೇನ್ ಮಾಡ್ದು? ಯಾರಿಗೂ ಪುಣ್ಯ ಇತ್ಲೆ. ಆಗ ಮಾಸ್ತ್ರ ಹಂಞ ಆರೋಗ್ಯಲಿ ಇದ್ದರ್‌ಂದ ಆಕಾದ ಕಾರ್ಯಬಾಗಗಳ ಊರವರ ಸಾಯಂದ ಏನೂ ತೊಡ್‌ಕಿಲ್ಲದೆ ಮಾಡಿ ಮುಗ್ಸಿದೊ. ಆ ಹದಿನಾರ್ ಕೊಲೆಗೆ ಕೂಡ್ಸವಲ್ಲಿಗೆ ಮುಟ್ಟನೂ ಮನೆನ ಯಜಮಾನ್ತಿನ ಹಂಗೆ ಓಡಾಡಿ ಆಕಾದ ಕಾರ್ಯಗಳ ಎಲ್ಲಾ ಒಂದೂ ಬುಡದೆ ಮಾಡ್ದ್ ಪೂವಿ. ಅಂತ ಮಗಳ್ ಈ ಸಮೆಲಿ ಯಾಕ್ ಬಾತ್‌ಲೇಂತ ಚಿಂತೆಲಿ ಬಿದ್ದೊ ಅಜ್ಜ.

ಮಕ್ಕಳ ಅಮ್ಮ ಇರ್‌ಕನ ಮುಟ್ಟ ಈ ಮನೆಲಿ ಸುಕ, ಸಂತೋಸ, ಕುಸಿಗಿಸಿ ಎಲ್ಲಾ ಇತ್ತ್. ನಂಗೂ ಹೊತ್ತು ಹೊತ್ತಿಗೆ ಬೇಕಾದ್ದೆಲ್ಲಾ ಬೇಕಾದಂಗೆ ಸಿಕ್ಕ್‌ತಿತ್ತ್. ಉಂಬುಕೆ ತಿಂಬಕೆ ಬಾಯಿಗೆ ರುಚಿಯಾದ್ದದೆಕ್ಕೆಲ್ಲಾ ಯಾವ ತೊಂದ್ರೆನೂ ಇತ್ಲೆ. ತೋಟ, ಗದ್ದೆಂತ ಆಚೀಚೆ ಓಡಾಡಿಕೆ ಮೈಲಿ ತ್ರಾಣನೂ ಇತ್ತ್. ಮೊದುವೆ ಗಿದುವೆ, ಸಬೆ ಸಮಾರಂಬಗಳಿಗೆ ಹೋಗಿ ಬಾಕು ಆತಿತ್ತ್. ಈಗ ಆ ದೇವ್ರ್‌ಗೇ

ಪ್ರೀತಿ. ಏನೋ ಪುಣ್ಯಕ್ಕೆ ಆ ಕೆಲ್ಸದ ಅಕ್ಕು ಇರ್‌ದರ್‌ಂದ ಒಪ್ಪೊತ್ತಾದರೂ ಹೊಟ್ಟೆ ತುಂಬಾ ಉಂಬಕೆ ಆದೆ. ಈ ಮಂಜಂದರ್‌ಂದ ನಾ ಪೋರ್ಸ್ಲಿ ಉಂಡಾಂಗೆ!? ಒಂದು ಕಾಗದ ಬರ್‌ದರೂ ಅದಕ್ಕೆ ಉತ್ತರ ಇಲ್ಲೆ. ಯಾಕೂ ಪುರುಸೊತ್ತೇ ಇಲ್ಲೆಗಡ! ಅವು ಆತ್, ಅವರ ಹೆಣ್ಣ್ ಮಕ್ಕ ಆತ್. ಕಳ್ದೋರ್ಸ ನಂಗೆ ಅಲ್ಸರ್ ಆಗಿ ಆಪರ್ಸನ್ ಆಕನೂ ಒಬ್ಬ ಮಂಜನೂ ಬಾತ್‌ಲೆ. ಆ ಸಮೆಲಿ ನಂಗೆ ಇದ್ದ್‌ದ್ ಮಗಳ್ ಪೂವಿ ಮಾತ್ರ ಕೂಸುನಾಂಗೆ ನನ್ನ ನೋಡಿಕಂಡ್ ಚಾಕ್ರಿ ಮಾಡ್ದ್ ಅದ್. ಕಾಲೇಜ್‌ಲಿ ಸಿ.ಎಲ್. ಮುಕ್ತ್‌ಂತ ಸಂಬಳ ಇಲ್ಲದೆ ರಜೆ ಹಾಕಿ ಆಸ್ಪತ್ರೆ ಮನೇಂತ ನನ್ನನ ಅಚ್ಚ್‌ಕಟ್ಟ್‌ಲಿ ನೋಡಿಕಂಡ್, ಮೆಲ್ಲೆ ಓಡಾಡುವಾಂಗೆ ಆದ ಮೇಲೆ ತಾನೆ ಅವ್‌ಳು ಗಂಡನ ಮನೆಗೆ ಹೋದ್ದ್. ಹಾಂಗೆ ಹೋಕನ ತನ್ನ ಮನೆಗೆ ಬನ್ನೀಂತ ಎಷ್ಟೋ ಬೊಡ್‌ಕಂತ್. ನಾನೇ ಬೇಡಾಂತ ಕುದ್ದೆ. ಕೊಟ್ಟ ಹೆಣ್ಣ್ ಕುಲಕ್ಕೆ ಹೊರಗೆ, ಮಂಜಂದರ್ ಇಬ್ಬರಿದ್ದ್‌ನೂ ಮಗಳಲ್ಲಿಗೆ ಹೋದರೆ ಅಳಿಯ ಏನ್ ತಿಳ್‌ಕಣರೂ, ಅವ್‌ಳ ಅತ್ತೆ ಮಾವ, ಊರ್‌ನ ಜನ ಏನ್‌ಂತ ಹೇಳುವಂತ ನಾ ಹೋತ್ಲೆ.

'ಅಪ್ಪ ಬನ್ನಿ ಉಂಬಕೆ'ಂತ ದೊಡ್ಡ ಮಂಜ ರಾಜ ಕರ್‌ತ್ತ್. 'ಪೂವಿ ಬಾದುನೆ ಹಂಞಾ ನೋಡ್ನೊ'ಂತ ಹೇಳ್ದೊ ಮಾಸ್ಟ್ರ. "ಅದ್ ಇನ್ನೆಲ್ಲಿ ಬಂದದೆ, ಬಾದಾಗಿದ್ದರೆ ಇಷ್ಟೊತ್ತಿಗೆ ಇಲ್ಲಿ ಇರ್‌ತಿತ್ತ್, ನೀವು ಉಂಬಕೆ ಬನ್ನಿ. ಬಟ್ಲ್ ಇಸಿ ಆವುಟು. ಎಲ್ಲವೂ ನೀವುಗೆ ಕಾದ್ ಕುದ್ದೊಳೊ"ಂತ ಹೇಳ್‌ಕನ ಬೇರೆನ್ ಮಾಡ್‌ಲಿಂತ ಉಂಬ ಕೋಂಬರೆಗೆ ಹೋದೊ. ಉಂಬ ಮೇಜದ ಮೇಲೆ ಮಟನ್ ಬಿರಿಯಾನಿ, ರೊಟ್ಟಿ, ಚಪಾತಿ, ಚಿಕನ್ ಕರಿ, ಕಬಾಬ್ ಎಲ್ಲಾ ನೋಡ್ದ ಮಾಸ್ಟ್ರಿಗೆ ಆಸ್ಚರ್ಯ! 'ಬಾರಿ ಗಮ್ಮತ್ ಮಾಡ್‌ದಾಂಗೆ ಕಂಡದೆ'ಂತ ಹೇಳ್‌ಕನ ದೊಡ್ಡ ಸೊಸೆ 'ಹೌದ್ ಮಾಂವ ಎಲ್ಲಾ ಅಪೂರ್ಪಕ್ಕೆ ಸೇರಿಯೊಳಲ್ಲಾ'ಂತ ಹೇಳ್ತ್. ಇಬ್ಬರ್ ಸೊಸೆಕ ಬಾರೀ ಕುಸಿಲಿ ಎಲ್ಲವುಕೂ ಇಕ್ಕ್‌ತಾ ಇದ್ದೊ. ಆದ್ರೆ ಮಾಸ್ಟ್ರ ಮನ್‌ಸ್ ಮಾತ್ರ ಮಗಳ್ ಪೂವಿನ ಗೇನ ಮಾಡ್ತಾ ಇತ್ತ್. ಹಬ್ಬದ ಅಡಿಗೆನ ಮಕ್ಕ, ಪಿಳ್ಳಿಕ ಎಲ್ಲವೂ ಬಾರಿ ಕುಸಿಲಿ ಉಂಬತ್ತಿದ್ದರೆ, ಇವುಕ್ಕೆ ಊಟನೇ ಸೇರ್‌ತ್ತ್ಲೆ. ಯಾರೇನಾರ್ ಗ್ರೇಸಿಕೆ ಬೊತ್ತಲಾಂತ ಕಣ್ಣ್‌ಕಟ್ಟಿಗೆ ಉಂಡಾಂಗೆ ಮಾಡಿ ಕೈ ತೊಳ್ದೊ.

ಬಾಡೆಲಿ ಕುದ್ದಿರ್‌ಕನ ಸಣ್ಣ ಸೊಸೆ ಹಣ್ಣ್‌ಗಳ ತಟ್ಟೆನ ತಂದ್ ಮಡ್‌ಗಿತ್. ಕಿತ್ತುಳಿ, ಆಪ್‌ಲ್, ಚಿಕ್ಕು, ಬಾಳೆ ಏನೋ ಎಲ್ಲಾ ಹಣ್ಣ್‌ಗ. ಎಲ್ಲವೂ ಕುಸಿಲಿ ನೆಗಾಡಿಕಂಡ್ ಅವುಕೆ ಬೇಕಾದರ ತಕಂಡ್ ತಿಂಬೊತಿದ್ದೊ. ಮಾಸ್ಟ್ರ ಮಾತ್ರ ಕಿತ್ತುಳಿನ ಎರ್ಡ್ ಎಸ್‌ಳ್ ತಕಂಡ್ ಬಾಯಿಗೆ ಹಾಕಿಕಂಡೊ. ಕಿತ್ತುಳಿನ ಹುಳಿ, ಸಿಂಯಿನ ಹೀಂಪಿಕಂಡ್ ನನ್ನ ಮುಂದೆನ ದಿನಗ ಬರೀ ಹುಳಿಯೊನೊಂತ ಚಿಂತೆಲಿದ್ದೊ. ಕಷ್ಟಕಾಕನ ಎಲ್ಲಾ ಬುಟ್ಟ್ ಓಡೋಡಿ ಬರ್‌ತಿದ್ದ ಪೂವಿಗೆ ಈಗೆಂತ ಅಂತ ತಾಪತ್ರೆಂತ ಚಡಪಡ್‌ಸ್‌ತಿದ್ದೊ.

"ನಾಳೆ ಹೊತಾರೆ ನಾವೆಲ್ಲಾ ಹೊರ್‌ಡೊಕು. ನಾವ್ಗೆ ರಜೆ ಇಲ್ಲೆ. ನಾಳೆ ಕತ್ತಲೆಗೆ ಪ್ಲೈಟ್. ಈಗಳೆ ಗಂಟೆ ಮೂರುವರೆ ಆತ್. ಪಟ್ಟೆದಾರ ತಿಮ್ಮಯ್ಯಜ್ಜನ ಬಾಕೆ ಹೇಳಿಯೊಳೊ. ಆಚೆ ಮನೆ ಚಾಮಿ ಮಾಮ ಹೇಂಗೂ ಬಾದು. ಇನ್ನು ಬೇರೆವು ಯಾಕೆ ನಮ್ಮ ಆಸ್ತಿನ ಪಾಲು ಪಟ್ಟಿಮಾಡಿಕೆ"ಂತ ಹೇಳ್‌ತ್ ದೊಡ್ಡ ಮಂಜ ರಾಜ.

ಪಟ್ಟೆದಾರ ತಿಮ್ಮಯ್ಯಜ್ಜ ಜಾಗದ ಆರ್.ಟಿ.ಸಿ., ಕಾಪಿ ತೋಟದ ಸಿ.ಆರ್.ಸಿ. ಎಲ್ಲಾ ತಕಂಡ್ ನೋಡ್‌ತಿತ್ತ್. ಹಾಂಗೆ ಎಲ್ಲಾ ನೋಡಿ ಹತ್ತ್ ಎಕ್ರೆ ಕಾಪಿ ತೋಟ, ಇನ್ನೂರು ಬಟ್ಟಿ ಗದ್ದೆ, ಬಾಣೆ ಆರ್ ಎಕ್ರೆ ಇಷ್ಟೆ ತಾನೆ ನಿಮ್ಮ ಅಪ್ಪನ ಆಸ್ತಿ"ಂತ ಕೇಳ್‌ತ್ತ್. "ಈಗ ಇದರ್ಲಿ ಪಾಲೆಷ್ಟ್? ಎರಡೊ? ಮೂರೊ?ಂತ ಕೇಳ್ತ್ ಪಟ್ಟೆದಾರ. ಅಷ್ಟ್ ಕೇಳ್ದೇ ತಡ ಇಬ್ರೊಬ್ರು ಮಂಜದರ್ ಒಂದೇ ಉಸ್‌ರಿಗೆ "ಎರಡೇ"ಂತ ಹೇಳ್ದೊ. ಅದಕ್ಕೆ ಮಾಸ್ಟ್ರ ಮೆಲ್ಲೆ "ಮಗಳ್ ಪೂವಿಗೂ ಬರೀ ಎರ್ಡ್ ಎಕ್ರೆ ಕಾಪಿ ತೋಟನಾರ್ ಕೊಟ್ಟರೆ ಒಳ್ಳೆದಿತ್ತ್, ಈಗ ಹೇಂಗೂ ಹೆಣ್ಣ್ ಮಕ್ಕಳಿಗೂ ಹಕ್ಕುಟ್ಟುಗಡಲ್ಲಾ"ಂತ ಹೇಳ್ದೊ. ಅದ್‌ಕ್ಕೆ ದೊಡ್ಡ ಮಂಜ ರಾಜ "ಅದಕ್ಕೆ ಎಂತ ಪಾಲ್ ಹಂದಿ ಮಾಸನಾ? ಮೊದುವೆಲಿ ಕೇಜಿ ಕಟ್ಲೆ ಚಿನ್ನ ಹಾಕೊಳರಿ. ಅಲ್ಲಾ, ಆಸ್ತಿಲಿ ಪಾಲ್ ಬೇಕಾರೆ ಕೋರ್ಟಿಗೆ ಹೋಗಲಿ"ಂತ ಹೇಳಿಬುಟ್ಟತ್. ತಮ್ಮ ಗಪ್ಪುನೂ ಅಣ್ಣ ಹೇಳ್ದೇ ಸರೀಂತ ತಲೆ ಮುಕ್ಕ್‌ಡ ಹಾಕಿತ್. ಪೇಚಾಟಲಿ ಸಿಕ್ಕಿದ ಮಾಸ್ಟ್ರ ಏನೂ ಹೇಳಿಕಾಗದೆ ಉಸುರು ತೆಗ್‌ತ್‌ಲ್ಲೆ. ಹಾಂಗೂ ಹೀಂಗೂ ಅಪ್ಪನ ಆಸ್ತಿ ಎರ್ಡ್ ಪಾಲಾತ್!?

ಮಾಸ್ಟ್ರ ಅಲ್ಲಿಂದ ಎದ್ದ್ ಮೆಲ್ಲೆ ಮೆಲ್ಲೆ ದೊಣ್ಣೆ ಊರಿಕಂಡ್ ಅಂಗಳಕ್ಕೆ ಇಳ್ದ್ ಕಾಪಿ ಕಣಲಿದ್ದ ಕಲ್ಲ್‌ಬೆಂಚಿನ ಮೇಲೆ ಕುದ್ದ್ ಆಕಾಸನೊಮ್ಮೆ ಮನೆನ ಒಮ್ಮೆ ನೋಡ್ದೊ. ತಾನ್ ಕಟ್ಟಿದ ಮನೆ, ಬಾಳಿ ಬೊದ್‌ಕಿದ ಮನೆ, ಮಕ್ಕೆಲ್ಲಾ ಹುಟ್ಟಿ ಬೆಳ್ದ್ ರೆಂಕೆ ಪುಕ್ಕ ಬಂದ ಮೇಲೆ ಹಾರಿಹೋದ ಮನೆ. ನಾಳೆಂದ ಈ ಮನೆ ಕಾಲಿಯೇ ಕಾಲಿ. ಅಪ್‌ರೂಪಕ್ಕೆ ಬಂದ ಮಂಜಂದರ್ ನಾಳೆ ಮನೆನ ಕಾಲಿ ಮಾಡಿ ಹೋದವೆ. ಇನ್ನ್ ನನ್ನ ಮನೆನೂ ಕಾಲಿ, ಮನ್‌ಸೂ ಕಾಲಿ ಕಾಲಿ!

ದಿನಂದ ದಿನಕ್ಕೆ ನನ್ನ ಬಿ.ಪಿ. ಸುಗರ್ ಏರ್‌ತಾ ಉಟ್ಟು. ಇನ್ನ್ ಹೆಚ್ಚ್ ದಿನ ನನ್ನ ಕಾಲ ಇಲ್ಲೆಂತ ಗ್ರೇಸಿದ ಸೋಮಯ್ಯ ಮಾಸ್ಟ್ರ, ಆಸ್ತಿನ ಪಾಲ್ ಮಾಡಿ, ಕಾರ್‌ಬಾರದ ಹೊರೆನ ಮಂಜಂದರ ಹೆಗ್‌ಲಿಗೆ ದಾಟ್‌ಸೊನಾಂತ ಪೋನ್ ಮಾಡಿ ಬಾಕೆ ಹೇಳ್‌ದ್ದೊ. ಯಾಗೊಳು ರಜೆ ಇಲ್ಲೆ ಹಾಂಗೆ ಹೀಂಗೆಂತ ಹೇಳ್‌ತಿದ್ದ ಮಂಜಂದರ್ ತಮ್ಮ ಗ್ರೇಕೆಗೆ ಮುಂದೆನೆ ಓಡೋಡಿ ಬಂದದರಕಂಡ್ ಮಾಸ್ಟ್ರಿಗೆ ಒಂದ್‌ಕಡೆಂದ ಕುಸಿನೂ, ಇನ್ನೊಂದು ಕಡೆಂದ ಯೆತೆನೂ ಆತ್!?

ತಮ್ಮ ಮಗಳ್ ಪೂವಿಗೆ ಬರೀ ಎರ್ಡ್ ಎಕ್ರೆ ಕಾಪಿ ತೋಟನಾರ್

ಕೊಡೊಕೂಂತ ಮಾಸ್ತ್ರ ಗೇನ. ಆದರೆ ಅವುಳು ಮಾತ್ರ ಎರ್ಡರ್ಡ್ ಸತ್ತಿ ಫೋನ್ ಮಾಡಿ ಬಾಕೆ ಹೇಳಿರೂ ಯಾಕೆ ಬಾತ್ಲೆ? ಅದ್ ಯಾಕೆ ಬಂದದೆ. ಅದ್ಕೆ ಅದರ ಗಂಡ, ಮಕ್ಕಾಂತ ಅದರ್ದೇ ಲೋಕ ಇರ್‌ಕನ ಈ ಮುದಿಯ ಅಪ್ಪನ ಯಾಕೆ ಗೇನ ಆದೆ? ಯಾರಿಗೆ ಯಾರುನೂ ಇಲ್ಲೆ. ಈ ಲೋಕನೇ ಹಾಂಗೆ. ಎಲ್ಲಾ ಬ್ರಮೆ, ನಂಗೆನೂ ಮೊರ್‍ಲ್ಲ್, ನಂಗೆ ಯಾರೂನೂ ಇಲ್ಲೇಂತ ಮಾಸ್ತ್ರ ತಲೆ ತೊರ್‌ಸಿಕಂಡ್ ಕುದ್ದೊ.

ಕತ್ತಲೆಗೆ ಮಲ್‌ಗಿರೆ ಮಾಸ್ತ್ರಗೆ ಸುತರಾಂ ನಿದ್ದೆ ಬಾತ್ಲೆ. ಮನ್‌ಸ್‌ಲಿ ಎಂತೆಂತೋ ಗೇನಗ. ಕಳ್ದ ಕಾಲದ ನೆಂಪುಗ. ಮುಂದೆ ಹೇಂಗೋ ಏನೋಂತ ಚಿಂತೆ. ಮಂಜಂದರ್ ನನ್ನನ ಒಟ್ಟಿಗೆ ಕರ್‌ಕಂಡ್ ಹೋವನೋ? ದೊಡ್ಡ ಮಂಜ ರಾಜ ಸಿಂಗಾಪುರಕ್ಕಾರ್ ಕರ್‌ಕಂಡ್ ಹೋದು. ಹೋದರೂ ನಂಗೆ ಪರ್ದೇಸಲಿ ಹೇಂಗೆ ಆದು? ಅಲ್ಲಿಗೆ ಈ ವಯಸ್ಲಿ ಹೊಂದಿಕಂಬೊದು ಹೇಂಗೆ? ಅಲ್ಲಿನ ಹವೆ, ನೀರ್, ಜನ ಎಲ್ಲ ಬೇರೆನೇ. ಹೋಗಿಬುಟ್ರೆ ಹೇಂಗಾರ್ ಹೊಂದಿಕಣಕು. ಕಾಲಕ್ಕೆ ತಕ್ಕ ಕೋಲ ಕಟ್ಟೊಕು. ಬೇರೆ ದಾರೀನೇ ಇಲ್ಲೆ.

ಹೊತಾರೆ ಎದ್ರ್‌ಕನ ಮಂಜಂದರ್ ಹೊರ್‌ಡುವ ಅಂಬೆರ್ಪುಲಿ ಇದ್ದೊ. ಸೊಸೆಕ ಅವರ ಸೂಟ್‌ಕೇಸ್‌ಗಳ, ಬೇಗ್‌ಗಳ ತುಂಬುಸ್ತ ಇದ್ದೊ. ಪಿಳ್ಳಿಕ ಮಾತ್ರ ಈ ದೊಡ್ಡವರ ಲೋಕನೇ ಮರ್‌ತ್, ಸಿಕ್ಕಿದಸ್ಟ್ ಹೊತ್ತು ಲಾಯಿಕ್‌ಲಿ ಆಡೊನೋಂತ ಕೊಟೆಗೆ, ಕಾಪಿ ತೋಟಗಳ್ಳಿ ಕಣ್ಣ ಮುಚ್ಚಾಲೆ ಆಡ್‌ತಾ ಇದ್ದೊ. ಆಗ ದೊಡ್ಡ ಮಂಜ ರಾಜ ಅಪ್ಪನ ಹಕ್ಕಲೆ ಬಂದ್ "ಅಪ್ಪಾ ನಾವು ಇನ್ನ್ ಒಂದರ್ದ ಗಂಟೆಲಿ ಹೊರ್ಟವೆ. ನೀವು ಒಬ್ಬನೇ ಇನ್ನ್ ಈ ಮನೇಲಿರ್ದು ಕಸ್ಟ. ಕತ್ತಲೆಗೆ ಒಬ್ಬನೇ ಹೆಂಗೆ ಇದ್ದರೆ. ಏನಾರ್ ಹೆಚ್ಚಿಕಮ್ಮಿ ಆದರೆ ಯಾರ್ ಒಳೊ ಹಕ್ಕಲೆ? ಅದಕೆ ನಾವು ಮೈಸೂರ್‌ಲಿ 'ವಾನಪ್ರಸ್ಥ'ಂತೇಳುವ ನಿಮ್ಮಂತ ಪ್ರಾಯದವರ ಆಸ್ರಮಲಿ ಎಲ್ಲಾ ಇಚಾರ್ಸಿ, ಬೇಕಾದ ಏರ್ಪಾಡ್ ಮಾಡಿ ಹೋದವೆ. ಅಲ್ಲಿ ಅಜ್ಜ ಅಜ್ಜಿಕಳ ಬಾರೀ ಲಾಯಿಕ್ ನೋಡಿಕಂಡವೆಗಡ. ಹಂಞ ಏನಾರ್ ಕಾಯಿಲೆ ಕಸಾಲೆ ಆದರೂ ಕೂಡ್ಲೇ ಡಾಕ್‌ಟ್ರ್ ಬಂದವೆಗಡ. ಉಂಬಕೆ ತಿಂಬಕೆಲ್ಲಾ ಮನೆಂದೂ ಲಾಯಿಕ್ ಉಟ್ಟುಗಡ. ಈ ನಮ್ಮ ಆಸ್ತಿನೆಲ್ಲಾ ನಾವು ಇನ್ನೊಂದು ಆರ್ ಮೂರ್ ತಿಂಗಳ್ಳಿ ಒಳ್ಳ ಗಿರಾಕಿ ಸಿಕ್ಕಿರೆ ಮಾರುವೆ. ರೆಸಾರ್ಟೋ, ಹೋಂ ಸ್ಟೇ ನೋ ಮಾಡುವ ಕೇರಳದವ್ಕೋ, ತಮಿಳ್‌ನವ್ಕೋ ಮಾರಿಬುಟ್ಟವೆ. ಅವು ಆದರೆ ಒಳ್ಳ ದುಡ್ಡುನೂ ಕೊಟ್ಟವೆ. ನಮ್ಮ ಚಾಮಿ ಮಾಮ ಎಲ್ಲಾ ಏರ್ಪಾಡ್‌ನಾ ಮಾಡ್‌ನೇಂತ ಹೇಳ್ಳುಟ್ಟು" ಅಣ್ಣನ ಮಾತ್ ಆಕನನೇ ಬಂದ್ ಕುದ್ದ ಗಪ್ಪು "ಅಣ್ಣ ಹೇಳ್‌ದಾಂಗೆ ಮಾಡ್ದು ಒಳ್ಳದ್ ಅಪ್ಪ, ನೀವುಗೂ ಯಾವ ತಾಪತ್ರೆ ಇಲ್ಲೆ ನಾವುಗೂ ಒಳ್ಳದ್"ಂತ ಮೆಲ್ಲ ಹೇಳಿ ಅಲ್ಲಿಂದ ಪುಕುಳಿಗೆ ಕಾಲ್‌ಕೊಟ್ಟತ್.

ತನ್ನ ಮಂಜಂದರ್ "ನೀವು ನಮ್ಮೊಟ್ಟಿಗೆ ಬನ್ನಿ ಅಪ್ಪ, ನಾವು ನಿಮ್ಮ

ಬುಟ್ಟ್ ಹಾಕಿಕಿಲೆ, ಲಾಯಿಕ್‌ಲಿ ನೋಡಿಂಡವೆ"ಂತ ಒಂದು ಮಾತಿಗಾರ್ ಹೇಳ್‌ತ್ಲೆಲಾಂತ ಮಾಸ್ಟ್ರಿಗೆ ತುಂಬಾ ಬೇಜಾರ್ ಆತ್. "ನಮ್ಮ ಮಕ್ಕ ಎಲ್ಲರ ಹಾಂಗೆ ಅಲ್ಲ, ನಾವು ಅವ್ಕೆ ಸಣ್ಣದಿರ್‌ಕನ ತೋರ್ಸಿದ ಪ್ರೀತಿ, ಕೊಂಡಾಟ, ಅವರ ದೊಡ್ಡ ದೊಡ್ಡ ಓದಿಗೆ ಪಟ್ಟಪಾಡ್ ಇವೆಲ್ಲಾ ಗೊತ್ತಿದ್ದ ನಮ್ಮ ಮಕ್ಕ ನಮ್ಮ ಅಂತೂ ನಡುನೀರ್‌ಲಿ ಕೈಬುಡಿಕಿಲೆ ನಾವು ಪಿಳ್ಳಿಕಳ ಆಡ್‌ಸ್ತಾ ಸಿಂಗಾಪುರಲೊ, ಅಮೆರಿಕಲೊ ಕುಸಿಲಿ ಇರಕ್‌ತ ಹೇಳ್ತಾ ಇದ್ದ ಹೆಣ್ಣ್‌ನ ಮಾತ್‌ಗ ಗೇನ ಆಗಿ, ಕಟ್ಟಿದ ಗಾಳಿ ಗೋಪುರಕ್ಕೆ ಬೇಜಾರ್ ಮಾಡಿಕಂಡ್ ಯಾರ್ಗೂ ಕಾಂಬಕೆ ಬೊತ್ತುಂತ ಕಣ್ಣ್ ನೀರ್‌ನ ಪೂಜಿಕಂಡೊ.

ಇದ್ದಕಿದ್ದಾಂಗೆ ಸ್ಕಾರ್ಪಿಯೋ ಕಾರೊಂದು ಅಂಗಳಲಿ ಬಂದ್ ನಿಂತದರ ಕಂಡ್ ಎಲ್ಲವುಕೂ ಆಸ್ಚರ್ಯ. ಮಾಸ್ಟ್ರ ಕಣ್ ಅರೆ ಮುಚ್ಚಿ ಕಾರ್‌ನ ಬಣ್ಣ ನೋಡಿ ಇದ್ ನಮ್ಮ ಪೂವಿದೇ ಇರೊಕೂಂತೇಳ್‌ಕನ ಪೂವಿ ಕಾರ್‌ಂದ ಇಳಿಯೊದು ಕಂಡತ್. ಮಗಳೊಟ್ಟಿಗೆ ಅಳಿಯನೂ. ನೆನ್ನೆ ಬರಕಾದಮಗಳ್ ಇಂದ್ಯಾಕೆ ಬಾತ್‌ಂತ ಮಾಸ್ಟ್ರ ಗೇನ ಮಾಡ್ದೊ. ಬಂದವ್ಳ ಅಣ್ಣ ಅತ್ತಿಗೆಕಳೊಟ್ಟಿಗೆ ಸುಖದುಃಖ ಇಚಾರ್‌ಸಿ, ಮಕ್ಕಳ ಎತ್ತಿ ಆಡ್ಸಿತ್. ಮನೆ ಎಲ್ಲಾ ಓಡಾಡ್ತ್. ಕಾಪಿಗೀಪಿ ಕುಡ್ದ್ "ಅಪ್ಪ ನಿಮ್ಮ ಬಟ್ಟೆ ಬರೆಗೆಲ್ಲಾ ಎಲ್ಯುಟ್ಟು ಹೇಳಿ, ತಂದ ಮೊದ್ದು, ಮಾತ್ರೆ ಏನಾರ್ ಉಟ್ಟೋ? ಅದೆಲ್ಲಾ ಈ ಬ್ಯಾಗ್‌ಗೆ ತುಂಬುಸೊಕು. ನಿಮ್ಮ ಈಗ ನಮ್ಮ ಮನೆಗೆ ಕರ್ಕಂಡ್ ಹೋಕೆ ಬಂದೊಳೆ. ಈಗ ನಂಗೆ ನನ್ನ ಅಪ್ಪನೇ ಆಸ್ತಿ!?" ಹೀಂಗೆ ಹೇಳ್‌ದ ಮಗಳ ಮೋರೆನೊಮ್ಮೆ ಅಳಿಯನ ಮೋರೆನೊಮ್ಮೆ ಮಾಸ್ಟ್ರ ಕಣ್ ಬಾಯಿ ಬುಟ್ಟ್‌ಕಂಡ್ ನೋಡ್ದೊ!?

✍ಪಿ.ಜಿ.ಅಂಬೆಕಲ್

# ಎಸ್–203,
ವಿಶ್ವಾಸ್ ಡ್ಯಾಫೋಡಿಲ್ಸ್,
ರಾಮಚಂದ್ರಪುರ,
ಜಾಲಹಳ್ಳಿ ಪೋಸ್ಟ್,
ಬೆಂಗಳೂರು – 560013
ಮೊಬೈಲ್ ಸಂ: 9481390089

# ಬದ್ಕ ಬೆಳ್ಗಿತ್

"ಪೂವಿ ಕಾಲೇಜಿಂದ ಬಂದುಟಾ ಕಾವೇರಿ?" ಪೊನ್ನಪ್ಪ ತೋಟಂದ ಮನೆಯೊಳಗೆ ಎದುರಂದ ನುಗ್ಗುಕಾಕನ ಹೆಣ್ಣ್‌ನ ಕಾಂಬಕೆ ಸಿಕ್ಕಿ ಪ್ರಶ್ನಿಸಿದೋ.

"ಈಗ ತಾನೇ ಬಂದ್ ಬಟ್ಟೆ ಬದಲ್ ಮಾಡ್ತಾ ಉಟ್ಟು" ಕಂಚಿನ ಚೆಂಬುಲಿ ನೀರು ಮತ್ತೆ ಟವೆಲ್‌ನ ತಕಂಡು ಸ್ವಲ್ಪ ಹೊತ್ತ್ ಕಳ್ದ್ ಬಂದ್ ಗಂಡಂಗೆ ಕೊಡುತ್ತಾ ಹೇಳ್‌ದೆ ಕಾವೇರಿ.

ಕೈ ಕಾಲ್ ತೊಳ್ಕಂಡ್ ಟವೆಲ್‌ಂದ ಮುಖ ಲಾಯಿಕ ಒರೆಸಿಕಂಡು ಅಲ್ಲೇ ಸೋಫಾಲಿ ಕುದ್ದುಕಂಡೋ ಪೊನ್ನಪ್ಪನವು.

"ಕಾಫಿ ಆಗುಟ್ವಾ?"

ಹೆಣ್ಣ್‌ನ ಕಡೆ ನೋಡಿ ಕೇಳ್‌ದೋ.

"ಎರಡ್ ನಿಮಿಷಲಿ ತಂದು ಕೊಟ್ಟನೆ" ಎರಡ್ ನಿಮಿಷದಲ್ಲೇ ಪರಿಮಳಂದ ಕೂಡ್ದ ಬಿಸಿ ಬಿಸಿ ಕಾಫಿನ ತಂದ ಹೆಣ್ಣ್‌ನ ಕೈಯಿಂದ ತಕಂಡು ಕುಡ್ದೋ ಪೊನ್ನಪ್ಪನವು.

"ನಮ್ಮ ಪೂವಿಗೆ ಒಂದು ಒಳ್ಳ ಸಂಬಂಧ ಬಂದುಟ್ಟು ಬೆಂಗಳೂರಿನಲ್ಲಿ ಪ್ರಸಿದ್ಧ ಕಂಪೆನಿಲಿ ಎಂ.ಡಿ. ಆಗುಟ್ಟು. ಹುಡುಗ ಒಳ್ಳೆಯ ಮನೆತನದವ. ಕೂತು ತಿಂದ್ರೂ ಕರಗದಷ್ಟೂ ಸಂಪಾದನೆ ಉಟ್ಟು. ಹೇಗಾದರೂ ಮಾಡಿ ಒಪ್ಪಿಸುದು ಒಳ್ಳದು. ಅಥವಾ ಅದೇ ಜಮ್ಮೂಲಿ ಗಡಿ ಕಾಯುವ ಯೋಧಂಗೆ ಶಬರಿಯಂಗೆ ಕಾದುಕಂಡು ಇನ್ನೂ ಇದ್ದದ್ದೆ ಹೆಂಗೆ?"

ಗಂಡ ಅಸಮಾಧಾನಕರದ ಪ್ರಶ್ನೆ, ಕಾವೇರಿಗೆ ಸ ಮಗಳ ಹಠ ಅಸಮಾಧಾನ ತಂದಿತ್.

ಇವಳು ಹಿಂಗೇ ಮದುವೇನ ಮುಂದೂಡುತ್ತಾ ಬಂದ್ರೆ ಬಾಕಿ ಇಬ್ಬರೂ ಹೆಣ್ಮಕ್ಕಳ ಗತಿಯೇನಾದೆ. ಅದರನ್ನ ಯೋಚ್ನೆ ಮಾಡೋಕಾ ಬೇಡ?

ನಿಲ್ಲಿ, ಅವಳನ್ನೇ ಕರ್ದನೆ. ನೀವೇ ಕೇಳಿ ಪೂವಿನ. ಪೂವೀ ಇಲ್ಲಿ ಬಾ ಪಪ್ಪ ಕರೀತಾವೊಳೋ. ಹತ್ರ ಬಂದ ಮಗಳನ್ನೇ ಮೆಚ್ಚುಗೆಂದ ನೋಡುವೆ ಪೊನ್ನಪ್ಪನವು. ಸರಳತೆಯ ಅಲಂಕಾರಂದ ಕೂಡ್ದ ಮುದ್ದು ಮುಖ ನಿರಾಭರಣ ಚೆಲುವೆ ಪೂವಿ ಗಂಭೀರತೆಯ ಪ್ರತಿಕವಾಗಿ ಉಟ್ಟು.

"ಏನ್ ಪಪ್ಪಾ?" ಒಂದು ಒಳ್ಳೆಯ ಸಂಬಂಧ ಬಂದುಟು. ನಿನ್ನ ಒಪ್ಪಿಗೆ

ಬೇಕ್ ಅಷ್ಟೆ. ಇನ್ನ್ ಕಾದರೆ ಆಕಿಲ್ಲೆ ಕಂದಾ, ಇನ್ನೂ ಇಬ್ಬರ್ ತಂಗೆಕ್ಕ ಇರುದು ಮರೀಬೇಡ ಆತಾ.

ಪಪ್ಪಾ, ಒಬ್ಬಂಗೆ ಮಾತು ಕೊಟ್ಟ್ ಇನ್ನೊಬ್ಬನ್ನ ಮೊದ್ವೆಯಾದು ಹೆಂಗೆ ಹೇಳಿ? ಮನಸಾರೆ ನನ್ನ ಗಂಡತ ಗಪ್ಪುನ್ನ ಒಪ್ಪೊಂಡು ಆಗುಟ್ಟು. ಈ ವರ್ಷಲಿ ಅವರ ತಂಗೆಯ ಮೊದ್ವೆ ನಿಶ್ಚಯ ಆಗುಟ್ಟು. ನಮ್ಮ ಮೊದ್ವೆಗೆ ಅವರ ಮನೆಯವು ಒಪ್ಪೊಂಡೊಳೊ ಪಪ್ಪಾ"

"ಪೂವಿ ಆ ಗಡಿಕಾಯುವವನ ಮೊದ್ವೆಯಾಗಿ ಏನ್ ಸುಖ ಸಿಕ್ಕಿದೆ? ಪ್ರೀತ್ಸಿಕೆ ಬೇರೆ ಯಾರು ಸಿಕ್ಕಿತ್ಲೆನಾ ನಿಂಗೆ? ಅದೂ ಜಮ್ಮು ಅಂದರೆ ದಿನಾ ಒಂದಿಲ್ಲೊಂದು ಗಲಾಟೆ ಇದ್ದೇ ಇದ್ದದೆ. ಈಗ ಹಿಮಪಾತ ಬೇರೆ ನೋಡು. ನಿನ್ನ ಗಪ್ಪುನ ಮರೆತ್, ನಾವು ನೋಡ್ದ ಹೈದನ ಒಪ್ಪಿಕಾ ಆತಾ. ನೀನ್ ರಾಣಿಯಂಗೆ ಇದ್ದಿಯಾ"ತ ಅಮ್ಮ ಹೇಳ್ತ್.

ಹೌದಮ್ಮ ಪೂವಿ, ಅಮ್ಮ ಹೇಳುವುದರಲ್ಲಿ ಅರ್ಥ ಉಟ್ಟು. ಹೆತ್ತವರ ಮಾತುನ್ನ ಕಡೆಗಣಿಸಕಾಗದು. ಮೊದಲೇ ಮಿಲ್ಟ್ರಿಯವರ ಬದುಕು ಗಾಳಿಗೆ ಸಿಲುಕಿದ ತರಗೆಲೆಯಂಗೆ ಆಗುಟ್ಟು. ಯಾಗ ಏನು ಬೇಕಾದ್ರೂ ಸಂಭವಿಸಿದೆ.

ಸಾಕಪ್ಪಾ ಪ್ಲೀಸ್, ಯೋಧರ ಮೇಲೆ ಯಾಕಿಷ್ಟೊಂದು ಕೀಳರಿಮೆ ಉಟ್ಟು ನಿಮಿಗೆ? ಯಾರಿಗೋಸ್ಕರ, ಯಾತಕೋಸ್ಕರ ಅವು ಗಡಿ ಕಾಯುತ್ತವೊಳೋ? ಯಾರ ರಕ್ಷಣೆಗೋಸ್ಕರ ಹೋರಾಡುತ್ತಾವೊಳೊ? ಗಾಳಿ, ಮಳೆ, ಬಿಸಿಲನ್ನು ಲೆಕ್ಕಿಸದೆ ದೇಶಕೋಸ್ಕರ ನಮ್ಮೆಲ್ಲರಿಗೋಸ್ಕರ ತಮ್ಮ ಪ್ರಾಣವನ್ನೇ ಒತ್ತೆಯಿಟ್ಟುಕಂಡು ಹಗಲಿರುಳು ಜೀವವನ್ನು ಏಕೆ ಸವೆಸುತ್ತಾವೋಳೊ? ಅಂತವರ ಬಗ್ಗೆ ನೀವು ಇಂಥ ನಿರ್ಲಕ್ಷದ ಮಾತಾಡುದು ಸರಿಯಾ ಪಪ್ಪಾ? ಒಳ್ಳೆಯ ಮಾತು ಇರದಿದ್ರೂ ಪರವಾಗಿಲ್ಲೆ. ಅವರ ಬಗ್ಗೆ ಕಿಂಚಿತ್ತ್ ಕರುಣೆಯೂ ನಿಮಗೆ ಇಲ್ಲೆ. ದೇಶ ಕಾಯುವವಂಗೆ ಕೊಡುವ ಉಡುಗೊರೆ ಇದೇನಾ. ಸ್ಸಾರಿ ಪಪ್ಪಾ ಗಪ್ಪುವೇ ನನ್ನ ಗಂಡ. ನಾನೆಂದಿಗೂ ಅವ್ಕೇ ಮೀಸಲಾಗಿದ್ದನೆ.

ಪೊನ್ನಪ್ಪನವು ಸೆಟೆದು ನಿತ್ತೊ. ಒಹೋ ನಾವು ಹೊತ್ತು-ಹೆತ್ತಿದ್ದಕ್ಕೆ ಸಾರ್ಥಕ ಆತ್. ಎಲ್ಲಾ ನಿರ್ಧಾರ ನೀನೇ ತಕೆಂಡುಬಿಟ್ಟಾ? ಇನ್ನು ಹೇಳಿ ಪ್ರಯೋಜನ ಇಲ್ಲೆ. ನಿನ್ನಿಂದ ನಿನ್ನ ತಂಗೆಕಳ ಬದುಕು ಹಾಳಾಗೋತ್. ಇನ್ನು ನೀನುಟ್ಟು ನಿನ್ನ ಯೋಧನುಟ್ಟು.

ಪೂವಿಯ ಮನಸ್ಸಿಗೆ ತುಂಬಾ ನೋವಾತು. ನಾಡಿನ ರಕ್ಷಣೆಗೋಸ್ಕರ

ತನ್ನ ಸಂಬಂಧಗಳನ್ನು ದೂರಮಾಡಿ ಪ್ರಾಣನ್ನೇ ಪಣಕ್ಕಿಟ್ಟು ದೇಶನ ಕಾಪಾಡುವ ಯೋಧನ ಬಗ್ಗೆ ಕಿಂಚಿತ್ತು ಕರುಣೆಯಾದ್ರೂ ಬೇಡನಾ ನಿಮಿಗೆ? ಯಾರೇ ಎಷ್ಟೇ ಹೇಳಿರೂ ಕೂಡ ಪೂವಿ ಮಾತ್ರ ತನ್ನ ಗಟ್ಟಿ ನಿರ್ಧಾರನ ಸಡಿಲಿಸಿತ್ಲೆ. ಇದರ ಮಧ್ಯೆಲಿ ಜಮ್ಮುವಿನಿಂದ ಸುದ್ದಿಗ ವಾಹಿನಿಯಲ್ಲಿ ಬಿತ್ತರಗೊಳ್ಳಿಕೆ ಶುರು ಆತ್. ಹಿಮ ಕುಸಿತಂದ ಯೋಧರ ಸಾವು-ನೋವು ಕಾಣೆಯಾಗಿ ಹಿಮದ ಪ್ರಪಾತದಲ್ಲಿ ಸಿಲುಕಿದ ಅವಶೇಷಗಳ ದೃಶ್ಯ ಮಾಧ್ಯಮಗ ಬಿತ್ತರಿಸುವ ದೃಶ್ಯನ ನೋಡುಕಾಕನ ದಿಗಿಲಿನಿಂದ ಪೂವಿ ದೇವರನ್ನು ಭಕ್ತಿಯಿಂದ ಪ್ರಾರ್ಥಿಸಿಕೆ ಶುರು ಮಾಡ್ದೆ. ಅಪ್ಪ ಅಮ್ಮಂದಿರ ಹಿತನುಡಿಗಳನ್ನ ತಳ್ಳಿಹಾಕಿತ್ ಪೂವಿ.

ಬೆಳೆಗ್ಗೆನ ಸುದ್ದಿಯೊಂದು ಟಿ.ವಿ.ಯಲ್ಲಿ ಸ್ಫೋಟಗೊಂಡಿತ್ತ್. ಜಮ್ಮುವಿನಲ್ಲಿ ಕರ್ತವ್ಯ ನಿರತನಾಗಿದ್ದ ಸಂದರ್ಭಲಿ ಕೊಡಗಿನ ಗಪ್ಪುತ್ತೇಳುವ ಯೋಧನೊಬ್ಬನ ಮೇಲೆ ಭಾರೀ ಪ್ರಮಾಣದ ಹಿಮಪಾತ ಆಗಿತ್ತ್. ಹಿಮದಡಿ ಸಿಕ್ಕಿಕಂಡಿದ್ದ ಆ ಯೋಧ ಸಾವು ಬದ್ಕ್‌ನ ಹೋರಾಟ ಮಾಡ್ತ್. ಜೊತೆಗಾರರ್ ಹಿಮದಡಿಂದ ಅಂವನ ಹೊರಗೆ ತಂದೊ.

ಪೂವಿನ ಪುಣ್ಯದ ಫಲವೋತ್ತೇಳುವಂಗೆ ಗುಟುಕು ಜೀವ ಇತ್ತ್. ಒಂದ್ ಕಾಲ್ ಸ್ವಾಧೀನ ಕಳ್ಕಂಡಿದ್ದ ಅಂವನ ಮಿಲ್ಟ್ರಿ ಆಸ್ಪತ್ರೆಗೆ ಸೇರ್ಸಿದೊ. ಒಂದೆರ್ಡ್ ತಿಂಗ ಆಸ್ಪತ್ರೆಲಿದ್ದ ಗಪ್ಪು ಉಸಾರಾತ್. ಪೂವಿನ ಬದ್ಕ್‌ನ ಬೆಳ್ಗಿತ್.

✍ಮೇಡ್ತನ ಮೋಹನ್ ಕುಮಾರ್

ಭದ್ರಗೊಳ ಗ್ರಾಮ ಮತ್ತು ಅಂಚೆ,

ತಾರಿಕಟ್ಟೆ ವಯ ತಿತಿಮತಿ

ವಿರಾಜಪೇಟೆ ತಾಲೂಕು,

ದ.ಕೊಡಗು

ಮೊ : 9945017881

# ಪರಸ್ಪರ ತ್ಯಾಗ

ಒಂದೂರ್ಲಿ ಗೋಪಾಲ ಮತ್ತೆ ಗೌರಿತ್ತೇಳುವ ಗಂಡ ಹೆಣ್ಣ್ ಸಂಸಾರ ಮಾಡ್ಕಂಡ್ ಇದ್ದವೆ. ಅವು ತುಂಬಾ ಬಡವು. ಅವು ಇಬ್ಬರೂ ಒಬ್ಬರನ್ನೊಬ್ಬ ಪ್ರೀತಿಸಿ ಮದುವೆಯಾದವು. ಗೌರಿನ ತಲೆ ಕೂದಲು ಉದ್ದ ಇತ್ತ್. ಅವುಳು ಆ ಕೂದಲುನ ತುಂಬಾ ಖುಷಿಂದ ಪೋಷಣೆ ಮಾಡ್ತಿತ್ತ್. ಇನ್ನೂ ಹೆಚ್ಚಾಗಿ ಕೂದಲ್‌ನ ಪೋಷಣೆ ಮಾಡಿಕೆ ಅವಳಿಗೆ ಮನಸ್ಸಿದ್ದರೂ ಅದಕ್ಕೆ ಬೇಕಾದ ವಸ್ತುಗಳನ್ನ ತಂದು ಕೊಡಿಕ್ಕೆ ಗಂಡನತ್ರ ದುಡ್ಡ್ ಇತ್ತ್‌ಲೆ. ಇದ್ದದರ್ಲೇ ಕೂದಲ್‌ನ ಲಾಯ್ಕಾಗಿ ಉದ್ದಾಗಿ ಬೆಳ್ಸಿತ್ತ್.

ಹಿಂಗಿರ್ಕನ ಗಂಡ ಗೋಪಾಲನ ಹತ್ರ ಪೊರ್ಲಾದ ಬೆಲೆಬಾಳುವ ಒಂದ್ ವಾಚ್ ಇತ್ತ್. ಗೌರಿ ಕೂದಲ್‌ನ ಇಷ್ಟಪಟ್ಟಂಗೆ, ಗೋಪಾಲ ವಾಚ್‌ನ ತುಂಬಾ ಇಷ್ಟ ಪಟ್ಟಿತ್. ಅಂವ ಕಾಲೇಜಿಲಿ ಓದಿಕಂಡಿರ್ಕನ ಸಿಕ್ಕಿದ ಸ್ಕಾಲರ್‌ಶಿಪ್ ದುಡ್ಡ್‌ಲಿ ಆ ವಾಚಿನ ತಕಂಡಿತ್. ಎಲ್ಲಿಗೆ ಹೋದರೂ ಅವಂಗೆ ಆ ವಾಚ್ ಬೇಕೆ ಬೇಕು. ಒಂದಿನ ಆ ವಾಚ್ ರಿಪೇರಿ ಆಗಿ ಕೈ ಕೊಟ್ಟತ್. ಅದರ ರಿಪೇರಿ ಮಾಡ್ಸಿಕೂ ಅವನ ಹತ್ರ ದುಡ್ಡ್ ಇತ್ತ್‌ಲೆ. ಹಂಗಾಗಿ ಅಂವ ಸುಮ್ಮನೆ ವಾಚ್‌ನ ತೆಗ್ದ್ ಮಡ್ಗಿತ್. ಹಾಂಗಿರ್‌ಕನ ಹೆಣ್ಣ್ ಗೌರಿ ಬಂದ್ ನನ್ನ ಕೂದಲಿಗೆ ಎಣ್ಣೆ, ಶಾಂಪೂ, ಸೋಪು, ಬಾಚಣಿಗೆ, ಕ್ಲಿಪ್ಪು ಎಲ್ಲಾ ಬೇಕ್. ತಂದು ಕೊಡಿತ ಗಂಡನೊಟ್ಟಿಗೆ ಹೇಳಿಕಂಡದೆ. ಅದಕ್ಕೆ ಗಂಡ ಗೋಪಾಲ ಸಧ್ಯಕ್ಕೆ ನನ್ನ ಹತ್ರ ದುಡ್ಡು ಇಲ್ಲೆ. ಎರಡ್ ದಿನ ಕಳ್ದ್ ತಂದ್‌ಕೊಟ್ಟನೆತ ಹೇಳ್ತ್. ಇದನ್ನ ಕೇಳಿ ಗೌರಿಗೆ ತುಂಬಾ ಬೇಜಾರಾತ್.

ಮಾರಣೆ ದಿನ ಗೋಪಾಲ ಕೆಲ್ಸ ಹುಡ್ಕಿಕಂಡ್ ಹೋದೆ. ಹೊರ್ಟ್ ಹೋಕನ ರಿಪೇರಿ ವಾಚಿನ ಕೈಗೆ ಕಟ್ಟಿಕಂಡದೆ. ಆ ರಿಪೇರಿ ವಾಚ್‌ನ ಸಿಕ್ಕಿದ ರೇಟಿಗೆ ಮಾರಿ ಗೌರಿಗೆ ಬೇಕಾದ ವಸ್ತುಗಳನ್ನ ಖರೀದಿಸಿದೆ. ವಾಚ್ ಮಾರ್ಕನ ಗೋಪಾಲಂಗೆ ಅವನ ಹೃದಯನೇ ಕಿತ್ತ್ ಕೊಟ್ಟನೇಂತ ಅನ್ನಿದಷ್ಟ್ ಬೇಜಾರಾತ್. ಆದರೂ ಗೌರಿನ ಮನಸ್ಸಿಗೆ, ಬೇಜಾರಾಕಾಗದ್‌ತ ಅವಳಿಗೋಸ್ಕರ ಅವ್ಳು ಹೇಳ್ದ ಎಣ್ಣೆ, ಶಾಂಪೂ, ಬಾಚಣಿಗೆ, ಸೋಪು, ಕ್ಲಿಪ್ಪು, ಎಲ್ಲಾ ತಕಂಡ್ ಬಂದ್ ಅವ್ಳುಗೆ ಕೊಟ್ಟ್ ಅವಳ ಮೊಕಲಿ ಅರಳುವ ಖುಷಿನ ನೋಡೊಕೂತ ಆತೂರಾತುರಾಗಿ ಮನೆಗೆ ಬಂದದೆ. ಆದರೆ ಅಂವ ಮನೆಗೆ ಬಾಕನ ಹೆಣ್ಣ್ ಮನೇಲಿತ್ತ್‌ಲೆ. ಅವಳಿಗಾಗಿ ಕಾದ್‌ಕಂಡ್ ಮನೆ ಮುಂದೆ ಕುದ್ದತ್. ಎಂದೂ ಹೊರಗೆ ಹೋಗದ

ಗೌರಿ ಇಂದ್ ಎಲ್ಲಿಗೆ ಹೋತೂತ ಅರ್ಥ ಆಗದೆ ಗ್ಯಾನ ಮಾಡಿಕಂಡೇ ಕುದ್ದತ್. ಹಿಂಗಿರಕನ ಹೆಣ್ಣ್ ಬಾತ್. ಅವಳ್ನ ನೋಡಿ ಗಂಡ ಗೋಪಾಲಂಗೆ ಶಾಕ್ ಆತ್. ಅವಳು ಗಂಡನ ವಾಚ್ ರಿಪೇರಿಗೆ ದುಡ್ಡು ಕೊಡ್ಸಿಕೆ ತನ್ನ ಉದ್ದ ಕೂದಲ್‌ನ ಕತ್ರಿಸಿ ಮಾರಿ ಬಂದಿದ್ದದೆ.

ನಾನ್ ನಿನ್ನನ ಇಷ್ಟ್ ಪ್ರೀತಿ ಮಾಡ್ನೆ. ನೀನ್ ಕೂಡಾ ನನ್ನ ಇಷ್ಟೇ ಪ್ರೀತಿಸೋಕುತ್ತೇಳ್ದು ಪ್ರೀತಿಯಲ್ಲ. ಒಬ್ಬರನ್ನೊಬ್ಬರ ಖುಷಿ ಪಡ್ಸಿಕೆ ಎಷ್ಟು ಪ್ರಯತ್ನಪಟ್ಟವೆತ್ತೇಳ್ದರ್‌ಲಿ ಪ್ರೀತಿಯ ಅರ್ಥ ಅಡಂಗಿಟು.

ಗಂಡಂಗೆ ಹೆಣ್ಣ್‌ನ ಕುಸಿ ಮುಖ್ಯ ಆಗಿತ್ತ್. ಹೆಣ್ಣಿಗೆ ಗಂಡನ ಕುಸಿ ಅಷ್ಟೇ ಮುಖ್ಯ ಆಗಿತ್ತ್. ಇಬ್ಬರೂ ಇಬ್ಬರಿಗಾಗಿ ತಮ್ಮಿಷ್ಟದ ವಸ್ತುಗಳನ್ನ ಕಳ್‌ಕಂಬಕೆ ತಯಾರಿದ್ದೊ. ತ್ಯಾಗ ಮಾಡಿ ಪ್ರೀತಿಸುದು ಬೇಕಾಗಿಲ್ಲೆತ ಅಂದ್‌ಕಂಡವೆ. ಕೆಲ ಸಣ್ಣಪುಟ್ಟ ತ್ಯಾಗಗಳ್‌ಂದ್ ಸಂಬಂಧ, ಪ್ರೀತಿ ಗಟ್ಟಿ ಆದೇತಾದರೆ ಯಾಕೆ ಮಾಡಿಕ್ಕಾಗದ್?

✍ ಅಂಬೆಕಲ್ಲು ಸುಶೀಲ ಕುಶಾಲಪ್ಪ

ವಿನೋದ್ ಮೆಡಿಕಲ್ಸ್, ಮಡಿಕೇರಿ
ಮೊಬೈಲ್ ನಂ : 8660647118

## ಆಟಿ ಹದ್ನೆಂಟ್

ಆಗಸ್ಟ್ ತಿಂಗಳ ಮೂರರಂದ್
ಆಟಿ ಹಂದ್ನೆಟ್ಟ್‌ತ್ತೇಳಿ ಆಟಿ ಸೊಪ್ಪ್‌ದ್
ಪಾಯ್ಸ, ಕೇಕ್, ಕೇಸರಿಬಾತ್ ಇಂತದರೆಲ್ಲಾ
ಮಾಡಿಕಂಡ್ ಮನೆಯವೆಲ್ಲಾ ಗಮ್ಮತ್ತಾಗಿ ಉಂಡ್
ತಿಂದ್ ಕುಸಿಪಟ್ಟೊ.
ಆಟಿ ಹದ್ನೆಂಟರಂದೇ ವಿಶೇಷ ಏನ್‌ತ್ತೇಳ್ರೆ
ಆಟಿ ಸೊಪ್ಪುಲಿ ಹದ್ನೆಂಟ್ ತರದ
ಮದ್ದ್ ಅಂದ್ ಮಾತ್ರ ಇದ್ದದೆ ಗಡ.
ಆ ದಿನ ಕಳ್ದಂಗೆ ಒಂದೊಂದೇ ಮದ್ದ್
ಕಮ್ಮಿ ಆದೆ ಗಡ. ಹಂಗಾಗಿ ಮುಖ್ಯ ಆಗಿ
ಕೊಡಗ್‌ಲಿ ಆ ದಿನ ಆಟಿ ಸೊಪ್ಪುಂದ
'ಮದ್ದ್‌ಗೂಳ್'ತ ಮಾಡಿ ಉಂಡವೆ.
ನಮ್ಮ ಶರ್‍ರಲಿರುವ ಯಾವ್‌ದಾರ್ ಕಾಯಿಲೆ ಹೋಗುಲಿತ ನಮ್ಮ
ಹಿರಿಯವ್ ನಡ್ಸಿಕಂಡ್ ಬಂದ ಪದ್ಧತಿನೇ ಆಟಿ ಹದ್ನೆಂಟ್ ಆವುಟು.

# ಅಮ್ಮ – ಪೊಪ್ಪ, ಯು ಪೀಪಲ್ಸ್ ಆರ್ ಗ್ರೇಟ್!!

ಕಣ್ಣ್‌ಗೆ ಕಾಣ್ವ ಜೀವಂತ ದೇವ್ರುನ ಮರ್ತ್, ಕಣ್ಣ್‌ಗೆ ಕಾಣ್ದೆ ಇರ್‍ವ ದೇವ್ರುನ ಹುಡ್ಕಿಕಂಡ್ ಹೋದು ಎಷ್ಟ್ ಸರಿ? ಅಮ್ಮ ಪೊಪ್ಪ ಮತ್ತೆ ವಿದ್ಯೆ ಕಲ್ಸಿದಂತಹ ಗುರು ಇವು ನಮ್ಮ ಕಣ್ಣೆದುರಿಗೆ ಕಾಣ್ವ ದೇವ್ರು. ಇವರ್‍ನೆಲ್ಲ ಬುಟ್ಟ್ ಕಾಣದ ದೇವ್ರುನ ಅಲ್ಲಿ, ಇಲ್ಲಿ ಹುಡ್ಕಿಕಂಡ್ ಹೋದು ಎಷ್ಟರ ಮಟ್ಟ್‌ಗೆ ಸರಿತೇಳಿ ಸಂಸ್ಕೃತ ಸುಭಾಷಿತ ಒಂದ್ ಹೇಳ್ದೆ.

ವಯಸ್ಸ್ ನಾವ್ಗಳ್ನ ತುಂಬಾ ಬದ್ಲಾಯಿಸಿದೆ. ವಯಸ್ಸ್ ಬದ್ಲಾದಂಗೆ ವಯಸ್ಸ್‌ಗೆ ತಕ್ಕ ಹಾಂಗೇ ಹಂಙ ಮನಸ್ಸುನೂ ಬದ್ಲಾಕೆ ಸುರಾದೆ. ನಾವ್ಗಳ್ನ ಹೆತ್ತ್, ಹೊತ್ತ್ ಸಾಂಕಿದ ಅಮ್ಮ, ಪೊಪ್ಪ ನಾವ್ಗಳ ಇಷ್ಟ-ಕಷ್ಟ ಬೇಕು-ಬೇಡಗಳ್ನ ಪೂರೈಸಿಕಾಕನ ಅವ್ ನಾವ್ಗೆ ಸಾಕ್ಷಾತ್ ದೇವ್ರ ಹಾಂಗೆ ಕಂಡವೆ. ಯಾಗ ಅವ್, ಅದ್ ಮಾಡ್, ಇದ್ ಮಾಡ್, ಇದ್ ಮಾಡ್ಬೇಡ, ಅದ್ ಮಾಡ್ಬೇಡತ ಬುದ್ದಿ ಹೇಳಿಕೆ ಸುರು ಮಾಡ್ರೋ ಆಗ ಕಿರಿ ಕಿರಿ ಅನ್ಸಿದೆ.

ಈರಣ್ಣ, ಗೌರಕ್ಕ ದಂಪತಿಗಳ ಆರ್ ಮಕ್ಕಳ್ಲಿ ಒಬ್ಬನೇ ಒಬ್ಬ ಮಂಙ. ಅವನ ಹೆಸ್ರ್ ಕೂಸಣ್ಣ. ಅವಂಗೆ ಆರ್ ವರ್ಷ ಆಗಿರಕನ ಅಮ್ಮ ಪೊಪ್ಪನ ಮ್ಯಾಲೆ ಅವಂಗೆ ತುಂಬಾನೇ ಗೌರವವಿದ್ದದೆ. ಅಮ್ಮ ಪೊಪ್ಪಂಗೆ ಎಷ್ಟೆಲ್ಲ ವಿಶ್ಯಗ ಗೊತ್ತುತ ಆಶ್ಚರ್ಯ ಆದೆ. ಯಾರಾರ್ ಅವಂಗೆ ಹೊಡ್ದರೆ, ಬೈದರೆ ಪೊಪ್ಪಂಗೆ ಹೇಳ್ನೆತ ಹೆದ್ರಿಸಿದೆ....

ಕೂಸಣ್ಣ ಹತ್ ವರ್ಷಕ್ಕೆ ಕಾಲಿಟ್ಟಾಕನ ಪೊಪ್ಪ ಅಮ್ಮನ ಮ್ಯಾಲೆ ಇಟ್ಟಂತ ಗೌರವ ಹಂಙ ಕಮ್ಮಿಯಾಕೆ ಸುರಾದೆ. ಅಮ್ಮ ಪೊಪ್ಪನ, ಯಾಕೆ ಹಿಂಗೆ ನೀವ್ ಸುಮ್ಮ ಸುಮ್ಮನೆ ಸಿಟ್ಟ್ ಮಾಡಿಕಂಡ್ರೆತ ಕಂಪ್ಲೆಂಟ್ ಮಾಡಿಕೆ ಸುರುಮಾಡ್ದೆ ಇಂವ....

ಕೂಸಣ್ಣಂಗೆ ಹನ್ನೆರಡ್ ವರ್ಷ ಆಗ್ತಿದ್ದಂಗೆ ಅಮ್ಮ ಪೊಪ್ಪ ಈಗ ಮೊದ್ಲತರ ಇಲ್ಲೆ. ಅವು ನನ್ನ ಪ್ರೀತಿ ಮಾಡ್ದು ತುಂಬಾನೇ ಕಮ್ಮಿಯಾಗುಟುತ ಅನ್ಸಿದೆ. ಅವು ತುಂಬಾನೇ ಬದ್ಲಾಗಳೊತ, ಅಮ್ಮ ಪೊಪ್ಪನ ಮ್ಯಾಲೆ ಆರೋಪ ಹೊರ್‍ಸಿಕೆ ಸುರು ಮಾಡ್ದೆ ಕೂಸಣ್ಣ.

ಕೂಸಣ್ಣಂಗೆ ಹದ್ನಾರನೇ ವಯಸ್ಸಾಗ್ತಿದ್ದಂಗೆ ಈರಣ್ಣ ಗೌರಕ್ಕ ಇವಂಗೆ ದೊಡ್ಡ ತಲೆಬ್ಯಾನೇಯಾಗಿ ಕಂಡದೆ. ನಾ ಏನ್ ಮಾಡ್ರು ಅಮ್ಮ ಪೊಪ್ಪಂಗೆ ಇಷ್ಟ ಆಲೆ. ಎಲ್ಲಕ್ಕೂ ಒಂದಲ್ಲ ಒಂದ್ ಹೇಳ್ವೆತ ಅವ್ರ ಮೇಲೆ ಕೂಸಣ್ಣ ತಪ್ಪೊರ್‍ಸಿಕೆ ಸುರು ಮಾಡ್ದೆ.

ಕೂಸಣ್ಣಂಗೆ ಹತ್ತೊಂಬತ್ತ್ ವರ್ಷ ಆಕನ, ತನ್ನ ಪ್ರೀತಿಸಿ ಕೈ ತುತ್ತು ಕೊಟ್ಟ ಅಮ್ಮ ಪೊಪ್ಪನ ಹಕ್ಕಲೇ ಜಗಳ ಮಾಡಿಕೆ ಸುರ್‌ಮಾಡ್ದೆ.

ಕೂಸಣ್ಣಂಗೆ ಇಪ್ಪತ್ತೊಂದ್ ವರ್ಷ ಆಕ್ತಿದಂಗೆ ಅಮ್ಮ ಪೊಪ್ಪ ತುಂಬಾ ಸ್ಟ್ರಿಕ್ಟ್ ಮಾಡಿಕೆ ಸುರ್‌ಮಾಡ್ವೆ. ಎಲ್ಲಿಗೆ ಹೋಗಿದ್ದ? ಮನೆಗೆ ಬಾಕೆ ಯಾಕೆ ಇಷ್ಟ್ ಲೇಟ್? ಎಲ್ಲಿಂದ ಬಂದ? ದುಡ್ಡ್ ಯಾಕೆ ಬೇಕ್? ಎಷ್ಟ್ ಖರ್ಚಿ ಮಾಡಿಯ?ತ ಅಮ್ಮ ಪೊಪ್ಪ "ಏನ್‌ಕ್ವಾಯರಿ" ಮಾಡ್ವೆತ ಕೂಸಣ್ಣ ಅಮ್ಮ ಪೊಪ್ಪನ ದ್ವೇಷ ಮಾಡಿಕೆ ಸುರಾದೆ. ನಂಗೆ ಖರ್ಚಿ ಮಾಡಿಕೆ ಇಲ್ಲದ್ ಇನ್ ಯಾರಿಗೆತೇಳ್ವ ಪ್ರಶ್ನೆಗ ಅವನಲ್ಲಿ ಹುಟ್ಟಿಕಂಡದೆ.

ಕೂಸಣ್ಣಂಗೆ ಇಪ್ಪತ್ತೈದ್ ವರ್ಷ ಆಕನ, ಅಮ್ಮ ಪೊಪ್ಪನ ನೀವ್‌ಗೆ ಎಂತ ಗೊತ್ತು, ನಿಮಿಗಿಂತ ನಂಗೆ ಪ್ರಪಂಚದ ಬಗ್ಗೆ ಗೊತ್ತು. ನೀವು ಹಳೆ ಕಾಲದವ್ರಾಂಗೆ ಒಳರಿ. ನೀವ್ ಹೇಳ್ದು ಹಂಞನೂ ಸರಿಯಿಲ್ಲೆತ ವಾದಿಸಿಕೆ ಸುರು ಮಾಡ್ದೆ.

ಕೂಸಣ್ಣಂಗೆ ಮೂವತ್ತ್ ವರ್ಷ ಆಕ್ತಿದಂಗೆ ಕಂಕಣ ಬಲ ಕೂಡಿ ಬಂದದೆ. ಅಮ್ಮ ಪೊಪ್ಪ ಒಂದ್ ಪೊರ್ಲುನ ಗೂಡೆ ನೋಡಿ ಮದ್ವೆ ಮಾಡುವೆ. ಹೊಸದ್ರಲಿ ಹಕ್ಕಲೆನೇ ಜೀವನ ಮಾಡಿಕಂಡ್ ಖುಷಿಲಿ ಇದ್ದವೆ. ದಿನಗ ಕಳ್ದಂಗೆ ಅಮ್ಮ ಪೊಪ್ಪನ ಮಾತ್ಗ ಕೂಸಣ್ಣ ಮತ್ತೆ ಅವನ ಹೆಣ್ಣ್‌ಗೆ ಹೊಂದಿಕೆಯಾಗ್ತಿಲೆ. ಅಮ್ಮ ಪೊಪ್ಪ ಒಂದ್ ತರತ! ಮಂಞ ಸೊಸೆಂದ ಮಾತ್ ಬಂದದೆ. ವಯಸ್ಸಾದವ್ರಂದ ದೂರಾನೇ ಇದ್ದರೆ ಒಳ್ಳೆದ್‌ತ ಮಂಞ ಸೊಸೆ ಯೋಚಿಸ್ಸುವೆ.

ಕೂಸಣ್ಣಂಗೆ ಮೂವತ್ತೆರಡ್ ವರ್ಷ ಆಕನ, ಅಮ್ಮ ಪೊಪ್ಪ, ಮಂಞ ಸೊಸೆ ಮತ್ತೆ ವಾಸ ಮಾಡಿಕಂಡಿದ್ದ ಮನೆ ಕೂಡ ಬೇರೆ ಬೇರೆ ಆದೆ. ಮಂಞ ಸೊಸೆ ಮತ್ತೆ ಪಿಳ್ಳೆಕ ಖುಷಿಲಿ ಇರ್ಲಿತ, ತಾವ್ ಕಷ್ಟ ಪಟ್ಟ್ ಸಂಪಾದನೆ ಮಾಡ್ದ ಮನೆ ಬುಟ್ಟ್ ವೃದ್ಧಾಶ್ರಮ ಸೇರುವೆ ಈರಣ್ಣ ಗೌರಕ್ಕ ದಂಪತಿಗ.

ಕೂಸಣ್ಣಂಗೆ ಮೂವತ್ತೈದ್ ವರ್ಷ ಆಕ್ತಿದಂಗೆ ತನ್ನ ಮಕ್ಕಳ ರಂಪಾಟ, ಕಿರ್ಚಾಟ ಕೇಳಿ ಸುಸ್ತಾಗಿ, ತಲೆಕೆಟ್ಟ್ ಹೋದಂಗೆ ಆಗಿದ್ದದೆ.

ಕೂಸಣ್ಣಂಗೆ ಮೂವತ್ತೊಂಬತ್ತ್ ವರ್ಷ ಆಕನ ಮಕ್ಕಳಿಗೆ ತನ್ನ ಅಮ್ಮ ಪೊಪ್ಪನ ಹಾಂಗೇ ಶಿಸ್ತ್‌ನ ಪಾಠಗಳ್ನ ಹೇಳಿಕೆ ಸುರ್ಮಾಡ್ದೆ. ಆಗ ಕೂಸಣ್ಣಂಗೆ ತನ್ನ ಅಮ್ಮ ಪೊಪ್ಪನ ನೆನ್ಪಿದೆ. ಅವ್ ಮನೆಂದ ವೃದ್ಧಾಶ್ರಮಕ್ಕೆ ಸೇರ್ದ್ ಮತ್ತೆ ಮತ್ತೆ ಕನ್ಸ್ ಬಾಕೆ ಸುರಾದೆ.

ಕೂಸಣ್ಣಂಗೆ ಈಗ ನಲ್ವತ್ತೆರಡ್ ವರ್ಷ. ತನ್ನ ಅಮ್ಮ ಪೊಪ್ಪನ ಹಾಂಗೆ ಬಿಗಿಯಾಗದೆ ಹೋದರೆ ಮಕ್ಕಳ ವಿಷ್ಯಲಿ, ನನ್ನ ಮಾತ್ ಕೇಳಿಕಿಲೆ, "ಗಿಡ

ಆಕನ ಬಗ್ಗದ್, ಮರ ಆದಮೇಲೆ ಬಗ್ಗಿಕಿಲೆತ" ಮೆಲ್ಲೆ ಮೆಲ್ಲೆ ತನ್ನ ಮಕ್ಕಳ ಬಗ್ಗೆ ಗಮನ ಬಾಕೆ ಸುರಾದೆ.

ಕೂಸಣ್ಣಂಗೆ ನಲ್ವತ್ತೈದನೇ ವರ್ಷಲಿ, ಮಕ್ಕಳ ಸಾಂಕಿಕೆ, ಅವುಕೆ ವಿದ್ಯಾಭ್ಯಾಸ ಕೊಡ್ದು ಎಷ್ಟ್ ಕಷ್ಟತ ಗೊತ್ತಾಕೆ ಸುರಾತ್. ತನ್ನ ಪೊಪ್ಪ ಅಮ್ಮ ನನ್ನ ಸಾಂಕಿಕೆ ವಿದ್ಯಾಭ್ಯಾಸ ಕೊಡ್ಸಿಕೆ ಎಷ್ಟ್ ಕಷ್ಟ ಆಗಿರೊಕುತ ನೆನ್ಸಿಕಂಡ್ ಕಣ್ಣ್‌ಲಿ ನೀರ್ ಬಾಕೆ ಸುರಾದೆ. ಅಮ್ಮ ಪೊಪ್ಪನ ಬಗ್ಗೆ ಅಯ್ಯೋ ಅನ್ಸಿದೆ. ಆಗ ಕಾಲನೇ ಮಿಂಚಿ ಹೋಗಿದ್ದದೆ.

ಕೂಸಣ್ಣಂಗೆ ಐವತ್ತ್ ವರ್ಷ ಆಕನ, ನಂಗೇ ಇಬ್ಬರು ಮಕ್ಕಳ್ನ ಸಾಂಕಿಕೆ ಇಷ್ಟ್ ಕಷ್ಟ ಆಕನ, ತನ್ನ ಪೊಪ್ಪ ಅಮ್ಮ ಆರ್ ಮಕ್ಕಳ್ನ ಸಾಂಕಿಕೆ ಆ ಕಾಲಲಿ ಎಷ್ಟ್ ಕಷ್ಟ ಆಗಿರೊಕುತ ಈಗ ತನ್ನ ಮಕ್ಕಳ್ನ ಸಾಂಕುವ ಕಷ್ಟಲಿ ಕೂಸಣ್ಣಂಗೆ ಸಾಕ್ಷ್ಯ ಹೇಳ್ತೊಟ್ಟು.

ಕೂಸಣ್ಣಂಗೆ ಐವತ್ತೆಂಟ್ ವಯಸ್ಸ್ ಆಕ್ತಿದಂಗೆ ತನ್ನ ಮಕ್ಕಳ ಬಾಯಿಂದ ಹೀನಾಯ ಮಾತ್ ಕೇಳಿ ಆಕಾಶನೇ ತಲೆಮೇಲೆ ಬಿದ್ದಂಗೆ ಆದೆ. ಈಗಂತೂ ಕೂಸಣ್ಣಂಗೆ ತನ್ನ ಪೊಪ್ಪ, ಅಮ್ಮನ ತುಂಬಾನೇ ನೆನ್ಪುಗೆ ಬಾಕೆ ಸುರಾದೆ. ಮಕ್ಕಳ ಕಾಟ ತಿಕ್ಕಾಟ ಕೇಳಿಕಾಗದೆ ಎಲ್ಲಿಯಾರ್ ಪೋಯತ ಅನ್ಸಿದೆ.

ಕೂಸಣ್ಣ ತನ್ನ ಹಿರಿ ವಯಸ್ಸ್, ಅರ್ವತ್ತನೇ ವಯಸ್ಸ್ ಆಕನ ಗೋಡೆ ಮೇಲೆ ತನ್ನ ಪೊಪ್ಪ, ಅಮ್ಮ ಪೋಟೋಗಲ್ಲಿ ಶಾಂತವಾಗಿ ನೆಗಾಡಿಕಂಡ್ ಕುದ್ದದ್ ನೋಡಿ, ನನ್ನನೇ ನೋಡ್ತೊಳೊತ ಅನ್ನಿ ನೀವ್ಗ್‌ಳ್ನ ಅರ್ಥಮಾಡಿಕೆ ಇಷ್ಟ್ ವರ್ಷ ಬೇಕಾತ್. ನೀವ್ಗ್‌ಳ ಕಾಳಜಿ ಮಹತ್ವ ತಿಳ್ಕಣಿಕೆ ನಂಗೆ 54 ವರ್ಷ ಬೇಕಾತ್. ನೀವ್ಗ್‌ಳ್ನ ಅರ್ಥಮಾಡಿಕೆ ಆತ್ಲೆತ ಕಣ್ಣೀರ್ ಹಾಕ್ತಾ, ಅಮ್ಮ ಪೊಪ್ಪ ಯು ಪೀಪಲ್ಸ್ ಆರ್ ಗ್ರೇಟ್! ರಿಯಲೀ ಯು ಆರ್ ಗ್ರೇಟ್‌ತ ಕೂಸಣ್ಣ ಪಶ್ಚಾತ್ತಾಪ ಪಟ್ಟದೆ....

✍ಕೊಕ್ಕಲೇ ಮಾಲಿನಿ ಮುತ್ತಪ್ಪ

ಹೆವರನಾಡು ಗ್ರಾಮ
ಅಪ್ಪಂಗಳ ಅಂಚೆ,
ಮಡಿಕೇರಿ ತಾಲೂಕು, ಕೊಡಗು.
ಮೊ : 9448907293

# ಸಂಶಯದ ಸುಳಿಲಿ

ಅಂದ್ ರಾತ್ರಿ ಊಟ ಮಾಡ್ತಿದ್ದ ಇನ್ಸ್‌ಪೆಕ್ಟರ್ ಆನಂದ್‌ಗೆ ಪೊಲೀಸ್ ಸ್ಟೇಷನ್‌ಂದ ಅರ್ಜೆಂಟಾಗಿ ಯಾವುದೋ ಕೇಸ್ ವಿಚಾರಲಿ ಬರಕುತ ಫೋನ್ ಬಾತ್. ಆನಂದ್ ಆತುರಾತುರಾಗಿ ಊಟ ಮಾಡಿ ಹೊರ್ಟು ಹೋಗಿತ್ತ್.

ದಿವ್ಯ, ಆನಂದ್ ಬೇಗ ಬಾದುತ ಸುಮ್ಮನೆ ಬಾಗ್ಲ್ ಮುಂದೆ ಮಾಡಿ ಬಂದ್ ಊಟ ಮುಗ್ಸಿ, ಪಾತ್ರೆ ತೊಳ್ದ್ ಬಂದ್ ಮಲ್ಗಿದ್ದ ಕೂಸು ಆದಿತ್ಯನ ಹತ್ರ ಕುದ್ದ್ ಅರ್ಧ ಓದಿ ಮಡ್ಗಿದ್ದ ಪುಸ್ತಕ ತಕಂಡ್ ಓದಿಕೆ ಶುರು ಮಾಡ್ತ್.

ಸ್ವಲ್ಪ ಹೊತ್ತಿಗೆ ಮನೆ ಎದುರ್ ಹೆಜ್ಜೆ ಸದ್ದ್ ಕೇಳ್ಸಿತ್. ಆನಂದ್ ಬಂದಿರ್ದುತ ಕೆಮಿನಿಮಿರ್ಸಿ ಕುದ್ದತ್. ಎದ್ದ್ ನೋಡನತ ಅಂದ್‌ಕಂಡರೂ ಪುಸ್ತಕನ ಬುಟ್ಟ್ ಏಳಿಕೆ ಮನ್ಸಾತ್‌ಲೆ. ಪುಸ್ತಕ ಅಷ್ಟ್ ಇಂಟ್ರೆಸ್ಟಾಗಿತ್ತ್.

ಮರುಕ್ಷಣಲಿ ಬಾಗ್ಲ್ ದೂಡಿಕಂಡ್ ಒಬ್ಬ ಮನ್ಸ ಒಳಗೆ ಬಂದಿತ್ತ್. ಏದುಸುರ್ ಬುಡ್ತಿದ್ದ ಆ ಮನ್ಸ ಬಾಳ ದೂರಂದ ಓಡಿ ಬಂದಂಗೆ ಕಾಂಬತಿತ್ತ್. ದಿವ್ಯ ಬೆಚ್ಚಿ ಬೀತ್. ಜೋರಾಗಿ ಕಿರ್ಚಿಕೆ ಬಾಯಿ ತೆರ್ತ್. ಆದರೆ ಅವ್ಳ ಸ್ವರ ಗಂಟಲ್‌ಲೇ ಉಳ್ದ್ ಹೋತ್. ಅವ್ಳಿಗೇ ಅದ್ ಕೇಳ್ಸಿತ್‌ಲೆ. ಗಟ್ಟಿಮುಟ್ಟಾದ ಒಬ್ಬ ಮನ್ಸ ಕರಿಯ ಮುಸುಕು ಹಾಕಿ ನಿತ್ತಿತ್ತ್. ಒಳಗೆ ಬಂದ ಮನ್ಸ ತಾನೇ ಬಾಗ್ಲ್ ಹಾಕಿ ಸಮಾಧಾನಲಿ ಉಸಿರಾಡ್ತ್.

ಅಷ್ಟೊತ್ತಿಗೆ ಧೈರ್ಯ ತಂದ್‌ಕಂಡ ದಿವ್ಯ ಗಾಬರಿಲಿ ಕೇಳ್ತ್. "ಯಾರ್ ನೀನ್ ಇಲ್ಲಿಗ್ಯಾಕೆ ಬಂದ"

ಆ ಸ್ವರ ಕೇಳಿ ಬೆಚ್ಚಿ ಬಿದ್ದ ಆ ಮನ್ಸ ದಿವ್ಯನ ಮುಖನೇ ದಿಟ್ಟಿಸಿ ನೋಡ್ತ್. ಕೂಡಲೇ ತನ್ನ ಮುಸುಕುನ ತೆಗ್ದ್ ಹಾಕಿತ್. ದಿವ್ಯ ಒಂದ್ ಕ್ಷಣ ದಿಟ್ಟಿಸಿ ನೋಡಿ ಅವನ ಗುರ್ತ್ ಹಿಡ್ತ್.

"ಅಯ್ಯೋ... ನೀನಾ" ಮುಂದಕ್ಕೆ ಅವ್ಳ್‌ಂದ ಮಾತೇ ಹೊರ್ಟತ್‌ಲೆ. ಓಡ್ಸಿಕಂಡ್ ಬಂದಿದ್ದ ಪೊಲೀಸ್ರಂದ ತಪ್ಪಿಸಿಕಣಿಕೆ ಬಾಗ್ಲ್ ತೆರ್ದಿದ್ದ ಮನೆಗೆ ನುಗ್ಗಿತ್ತ್ ಆ ಮನ್ಸ.

ಅಂವ ಹೊರ್ಡುವ ಆತುರ ತೋರ್ಸಿತ್. ದಿವ್ಯ ಅವ್ನ ತಡ್ತ್. ಆದರೆ ಇದ್ ಇನ್ಸ್‌ಪೆಕ್ಟರ್ ಆನಂದ್‌ನ ಮನೆತ ತಿಳ್ದ್ ಆ ಮನ್ಸ ಬೆಚ್ಚಿ ಬೀತ್.

ದಿವ್ಯ ಅವಂಗೆ ಊಟಕ್ಕೆ ಹಾಕಿತ್. ಅಂವ ಅನ್ನ ಕಲ್ಸಿ ಬಾಯಿಗೆ ಹಾಕುವ ಹೊತ್ತಿಗೆ ಸರಿಯಾಗಿ ಬಾಗ್ಲ್ ಬಡ್ದ ಸದ್ದಾತ್. ದಿವ್ಯ ಅವನ ಹಿಂದೆನ ಬಾಗ್ಲ್‌ಂದ ಕಳ್ಸಿ ಬಂದ್ ಬಾಗ್ಲ್ ತೆರ್ತ್. ಬಾಗ್ಲ್ ತೆಗಿಯಕೆ ತಡ ಆದಕ್ಕೆ ಹಂಗೆ ಒಳಗಿಂದ ಗಂಡಸ್‌ನ ಸ್ವರ ಕೇಳ್ಸಿಕಂಡಿದ್ದ ಆನಂದ್ ಯಾರ್ ಬಂದಿದ್ದೊತ ವಿಚಾರ್ಸಿತ್.

ದಿವ್ಯನ ತೊದಲ್ ಉತ್ತರ ಅವಂಗೆ ಸಂಶಯ ಹುಟ್ಟಿಸಿತ್. ಸಿಟ್ಟ್‌ಲಿ ಮಾತಾಡದೆ ಹೋಗಿ ಮಲ್ಗಿತ್. ತಲೆಲಿ ನೂರೆಂಟ್ ಯೋಚನೆಗ ಸುಳಿದಾಡ್ತಿದ್ದೊ.

ಮತ್ತೊಂದ್ ದಿನ ಹಗ್ಲ್ ಆ ವ್ಯಕ್ತಿ ಬಂದಿತ್ತ್. ಅಂವ ಬಂದ್ ವಾಪಾಸ್ ಹೊರ್ಡ್‌ಕನ ಆನಂದನೂ ಬಂದಿತ್ತ್. ಆ ವ್ಯಕ್ತಿ ಗೇಟು ದಾಟುದಕ್ಕೂ ಆನಂದ್ ಬಾದುಕೂ ಸರಿ ಆಗಿತ್ತ್. ಆದರೆ ದಿವ್ಯ ಇದನ್ನ ಗಮನಿಸಿತ್ತ್‌ಲೆ.

ಆನಂದ ಆ ವ್ಯಕ್ತಿನ ದಿಟ್ಟಿಸಿ ನೋಡ್ತ್. ಪರಿಚಯ ಮುಖತ ಅನ್ಸಿತ್‌ಲೆ. ಅಲ್ಲದೆ ಆ ಅಪರಿಚಿತ ವ್ಯಕ್ತಿನ ಸಂಬಂಧ ಎಂತತ ದಿವ್ಯನೂ ಹೇಳಿತ್ತ್‌ಲೆ. ಇದ್ರಂದಾಗಿ ಆನಂದನ ತಲೆಗೆ ಮುಂದೆನೇ ಹೊಕ್ಕಿದ್ದ ಸಂಶಯದ ಹುಳು ಜಾಸ್ತಿ ಕೊರಿಯಕೆ ಶುರು ಮಾಡಿತ್ತ್. ಸ್ವಲ್ಪ ಹೊತ್ತ್ ಮನೆ ಹೊರಗೆನೇ ಸುತ್ತಾಡಿ ಒಳಗೆ ಬಾತ್. ಸಿಡ್ಕಿಕಂಡೇ ಒಳಗೆ ಬಂದ ಆನಂದ ಊಟ ಮಾಡಿಕಂಡೇ
"ಇಂದ್ ಮನೆಗೆ ಯಾರ್ ಬಂದಿದ್ದೊ" ತ ಕೇಳ್ತ್.
"ಯಾರೂ ಬಾತ್‌ಲೆಲಾ" ತೇಳ್ಕನ ಆನಂದನ ಸಿಟ್ಟ್ ನೆತ್ತಿಗೇರ್ತ್. ಅಂವ ಬಾಯಿಗೆ ಬಂದಂಗೆ ಕಿರ್ಚಾಡ್ತ್.

ದಿವ್ಯ ತುಟಿ ಎರ್ಡ್ ಮಾಡ್ತ್‌ಲೆ. ಆ ವ್ಯಕ್ತಿನ ಬಂದಿತ್ತ್‌ತ ಹೆಂಗೆ ಹೇಳ್ದುತ ಗ್ಯಾನ ಮಾಡ್ತಿತ್ತ್. ಆನಂದ್ ಎಷ್ಟಾದರೂ ಪೊಲೀಸ್ ಇಲಾಖೆಯವ! ಆ ವ್ಯಕ್ತಿ ಪೊಲೀಸರಿಗೆ ಬೇಕಾದ ಕೊಲೆಗಾರ! ಅವ್ಳು ಉಭಯ ಸಂಕಟಲಿ ತೊಳಲಾಡ್ತ್. ಅಲ್ಲದೆ ಆನಂದ ಬೇರೆ ದಯಾದಾಕ್ಷಿಣ್ಯ ಇಲ್ಲದ ನಿಷ್ಠಾವಂತ ಅಧಿಕಾರಿಯಾಗಿತ್ತ್.

ಮನೆ ಅಶಾಂತಿನ ಗೂಡಾಗಿತ್ತ್. ದಿನಾ ಸಿಡಿಮಿಡಿ. ಸಂಶಯತೇಳ್ದು ಬಹಳ ಅನರ್ಥಕಾರಿ. ಸಂಶಯತೇಳ್ದು ದುರಂತದ ಮುನ್ಸೂಚನೆ. ಅವನತಿನ ಮೊದಲ ಮೆಟ್ಲ್.

ಆನಂದಂಗೆ ದಿವ್ಯನ ಸಿಟ್ಟ್‌ಲಿ ನುಂಗಿ ಬಿಡ್‌ವಂಗೆ ಆಗಿತ್ತ್. ತಮ್ಮ ಸುಖ ಸಂಸಾರಲಿ ಮಧ್ಯೆ ಬಂದ ಆ ವ್ಯಕ್ತಿ ಸಿಕ್ಕಿರೆ ಚೂರ್ ಚೂರ್ ಮಾಡಿಬಿಡಕು ಅನ್ಸಿತ್ತ್.

ಪೊಲೀಸ್ ಅಧಿಕಾರಿಯಾದ ತನ್ನ ಕರ್ತವ್ಯ ಪ್ರಜ್ಞೆ ಎಚ್ಚರ್‌ಸ್ತಿತ್ತ್. ಆನಂದ ದಿವ್ಯರ ಮಧ್ಯೆ ಮಾತಿಲ್ಲೆ – ಕತೆಯಿಲ್ಲೆ. ಪುಟ್ಟ ಆದಿತ್ಯನ ಮುಖಾಂತರ ಏನಿದ್ದರೂ. ಅವನಿಲ್ಲದಿದ್ದರೆ ಬಹುಶಃ ದೇವರೇ ಗತಿ!

ಹೆಜ್ಜೆ ಮೇಲೆ ಹೆಜ್ಜೆ ಹಾಕಿ ಬಾತ್ ಆನಂದ. ಸಾಯಂಕಾಲದ ಹೊತ್ತ್ ಕತ್ತಲೆ ಆಗ್ತಾಯಿತ್ತ್. ಒಳಗಿಂದ ಮಾತ್ ಕೇಳ್ತಿತ್ತ್. ಬಾಗ್ಲ್‌ನ ಜಾಡ್ಸಿ ಒದ್ದತ್. ಬಾಗ್ಲ್ ತೆರ್ದ್‌ಕಣ್ತ್. ಮತ್ತೆ ಅದೇ ವ್ಯಕ್ತಿ. ದಿವ್ಯನ ಕೈ ಹಿಡ್ದ್ ಏನೋ ಹೇಳ್ತಿತ್ತ್. ಮರುಕ್ಷಣಲಿ ಆ ವ್ಯಕ್ತಿ ಒಂದೇ ಹಾರಿಗೆ ಮಾಯ ಆಗಿತ್ತ್. ಆನಂದ ಶಕ್ತಿ ಇದ್ದಷ್ಟ್ ಬೀಸಿತ್ ದಿವ್ಯನ ದವಡೆಗೆ. ದಿವ್ಯ ಬ್ಯಾನೆ ಅಪಮಾನ ಸಹಿಸಿಕೆ ಆಗದೆ ಕುಸ್ದ್ ಹೋತ್. ಆನಂದ ಆಗಲೇ ತನ್ನ ಬಟ್ಟೆಗಳ್ನ ಜೋಡ್ಸಿಕಂಡ್ ಮನೆಂದ ಹೊರ್ಟು ಹೋತ್.

ಮುಂದೆ ಒಂದ್ ವಾರ ಕಳಿಯಕನ ಆನಂದಂಗೆ ಬ್ಯಾರೆ ಊರಿಗೆ ವರ್ಗ ಆದ ವಿಷ್ಯ ಎಲ್ಲರ ಬಾಯಿಲೂ ತುಂಬಿತ್ತ್. ನೀವು ಅವರೊಟ್ಟಿಗೆ ಹೋದುಲೆನಾ? ತ ಎಲ್ಲವು ದಿವ್ಯನ ಕೇಳ್ಕನ ಅವ್ಳು ತನ್ನ ಚಾಕರಿನ ನೆಪ ಹೇಳಿ ಜಾರಿ ಕಂಬತ್ತಿತ್ತ್.

ದಿವ್ಯನ ಬಾಳ್ ಬರಿದಾಗಿತ್ತ್. ಪುಟ್ಟ ಆದಿತ್ಯ ಅವ್ಳ, ಬಾಳಿಗೆ ದೀಪ. ಆನಂದನ ಸಮಾಚಾರನೇ ಇತ್ತ್‌ಲೆ. ಒಂದೆರಡ್ ತಿಂಗ ಕಳ್ದ್ ಹೋತು. ಬೆಂಗಳೂರಿಗೆ ವರ್ಗ ಮಾಡ್ಸಿಕಂಡಿದ್ದ ಆನಂದ ತನ್ನ ಕೆಲ್ಸಕ್ಕೆ ರಾಜೀನಾಮೆ ಕೊಟ್ಟುಟ್ಟುತೇಳ್ವ ಸುದ್ದಿ ಕೇಳಿ ದಿವ್ಯಂಗೆ ಹೆದ್ರಿಕೆ ಆತ್. ಅವ್ಳ ದುಃಖ ಹೆಪ್ಪುಗಟ್ಟಿ ಹೋಗಿತ್ತ್. ಅವ್ಳ ಚಾಕರಿ ಒಂದೇ ಅವ್ಳ ಬದ್ಕಿಗೆ ಆಸರೆ ಆಗಿತ್ತ್. ಅವ್ಳ ಸ್ವಾಭಿಮಾನ ಘನತೆಗ ಬ್ಯಾರೆಯವ್ರ ಎದ್ರುಗೆ ತಲೆ ತಗ್ಸ್‌ವಂತ ಸಂದರ್ಭನ ಸಹಿಸ್‌ತಿತ್ಲೆ. ದಿನ ಕಳ್ದಂಗೆ ಆನಂದ ಇಲ್ಲದೆ ಬದ್ಕುದುನ ಅಭ್ಯಾಸ ಮಾಡಿಕಣ್ತ್.

* * * * *

ಸುಮಾರ್ ಆರ್ ವರ್ಷ ಕಳ್ದ್ ಹೋಗಿತ್ತ್. ಪುಟ್ಟ ಆದಿತ್ಯ ಮೂರನೇ ಕ್ಲಾಸಿಗೆ ಬಂದಿತ್ತ್. ಅಂವ ದಿನಾ ಅವ್ನ ಗೆಳೆಯರ್ ಅಪ್ಪಂದರ ವಿಷ್ಯ ಮಾತಾಡ್ದುನ ಅಮ್ಮನ ಹತ್ರ ಬಂದ್ ಹೇಳ್ತಿತ್ತ್. 'ನನ್ನ ಅಪ್ಪ ಎಲ್ಲಿ'ತ ಕೇಳ್ತಿತ್ತ್. ಅಪ್ಪಂಗೆ ರಜ ಇಲ್ಲೆಗಡ, ನಾ...ಳೆ ಬಂದವೆತ ಹೇಳಿ ಹೇಳಿ ಅವ್ಳಿಗೆ ಸಾಕಾಗಿತ್ತ್. ಪಾಪ ಕೂಸುಗೆ ಸುಳ್ಳು ಹೇಳುವಂತ ಕರ್ಮ ನನ್ನದ್‌ತೇಳಿ ಅವ್ಳು ನಿಟ್ಟುಸುರು ಬಿಡ್ತಿತ್ತ್. ಅವ್ಳ ಮನಸ್‌ಗ ವೇದನೆನ ಹೊರಗೆ ಹಾಕ್ತಿತ್ತ್.

* * * * *

ಅಂದ್ ಅಪರೂಪಕ್ಕೆ ಪೋಸ್ಟ್‌ಮ್ಯಾನ್ ಎರ್ಡ್ ಕಾಗದ ಕೊಟ್ಟ್ ಹೋತ್. ಅವ್ಳು ಆಶ್ಚರ್ಯಲಿ ನೋಡ್ತ್. ಹೌದು ಅವ್ಳ ಹೆಸ್ರಿಗೇ ಬಂದಿತ್ತ್. ತನಿಗೆ ಕಾಗದ ಬರೆಯವು ಯಾರ್ ಇಲ್ಲೆತ ಅಲ್ಲ. ಈಗೆಲ್ಲಾ ಎಲ್ಲಾ ವಿಷ್ಯಗ ಮೊಬೈಲ್‌ಲೇ ನಡ್ದ್ ಹೋಗ್ತಿತ್ತ್. ಬೆಳಿಗ್ಗೆ ಗುಡ್‌ಮಾರ್ನಿಂಗ್ ಮೆಸೇಜ್‌ಂದ ಹಿಡ್ದ್, ಬರ್ತ್‌ಡೇ ಮತ್ತೆ ಒಳ್ಳೆ ಕೆಟ್ಟ ಎಲ್ಲಾ ಸಮಾಚಾರಗ ಮೊಬೈಲ್‌ಲೇ ಬಾತಿತ್ತ್.

ಮೆಲ್ಲೆ ಒಂದ್ ಕಾಗದ ತೆರ್ದ್ ನೋಡ್ತ್. ಆ ಅಕ್ಷರಗ ಯಾರ್ದುತ ಗೊತ್ತಾತ್‌ಲೆ. ಹೊಸ ಕೈ ಬರಹ. ಕಾಗದದ ಕೆಳಗೆ ಬರ್ದ್‌ದ್ ನೋಡ್ತ್. "ಕೃಷ್ಣ, ಬಳ್ಳಾರಿ ಸೆಂಟ್ರಲ್ ಜೈಲ್" ಎದೆ ಧಸಕ್‌ತೇಳ್ತ್.

ಕಾಯಿಲೆಂದ ನರಳ್ತಿದ್ದ ಕೃಷ್ಣ ಕಡೇ ಸಲ ನೋಡಕುತೇಳಿ ಕಾಗದ ಬರ್ದಿತ್ತ್. ತಾನ್ ಜಾಸ್ತಿ ದಿನ ಬದುಕುದುಲೆ ಒಮ್ಮೆ ಬಂದ್ ನನ್ನ ನೋಡುತ ಬರ್ದಿತ್.

ಎರಡನೇ ಕಾಗದನ ಓದುತ್ತಿದ್ದಂಗೆ ಹಾಸಿಗೆ ಮ್ಯಾಲೆ ದೊಪ್ಪ್ತ ಬೀತ್. ಅವ್ಳ ಕಣ್ಣ್ಂದ ನೀರ್ ಇಳಿಯತ್ತಿತ್ತ್.

"ಯಾಕಮ್ಮಾ ಮರ್‍ಡ್ತಾವಳಾ" ತೇಳ್ಕನೇ ಅವ್ಳಿಗೆ ಎಚ್ಚರ ಆದ್. ಕೈಲಿದ್ದ ವಾಚ್ ಐದ್ ಗಂಟೆ ತೋರ್‍ಸ್ತಿತ್ತ್. ಬಾಳ ಹೊತ್ತ್ಂದ ಇಲ್ಲೆ ಕುದ್ದಿದ್ದೆತ ಅನ್ನಿ ರೋಷಂದ ಆ ಕಾಗದ ತೆಗ್ದ್ ದೂರ ಬಿಸಾಕಿತ್. ತನ್ನನೇ ನೋಡ್ತಿದ್ದ ಪುಟ್ಟ ಆದಿತ್ಯನ ತಲೆ ಸವ್ರಿ,

"ಮರ್‍ಡ್ತಾ ಇಲ್ಲೆಪ್ಪಾ, ಕಣ್ಣ್‌ಗೆ ಕಸ ಬೀತ್ ಅದ್ಕೆ ಕಣ್ಣ್‌ಲಿ ನೀರ್ ಬಾತ್. ಅವ್ನ ಹೆಗಲ್ ಮ್ಯಾಲೆ ಇದ್ದ ಪುಸ್ತಕದ ಹೊರೆನ ಎತ್ತಿ ಮಡ್ಗಿ ಕೈಕಾಲ್ ತೊಳ್ಸಿ ತಿಂಡಿ–ಹಾಲು ಕೊಟ್ಟತ್.

"ಅಮ್ಮಾ, ನೀನ್ ಆಫೀಸಿಗೆ ಹೋತ್ಲೆನಾ"

"ಹೋಗಿದ್ದೆಪ್ಪಾ, ಯಾಕೋ ತಲೆ ಬ್ಯಾನೆತ ಮಧ್ಯಾಹ್ನ ಬಂದ್‌ಬುಟ್ಟೆ" ಆದಿತ್ಯ ತಿಂಡಿ ತಿಂದ್‌ಕಂಡ್ ತನ್ನ ಸ್ಕೂಲ್, ಮೇಡಂ, ತನ್ನ ಫ್ರೆಂಡ್ಸ್‌ಗಳ ವಿಷ್ಯ ಏನೋನೋ ಹೇಳ್ತಿತ್ತ್. ಆದರೆ ದಿವ್ಯ ಸುಮ್ಮನೆ ಹೂಂಗುಟ್ಟ್‌ತಿತ್ತ್. ಅವ್ಳ ಮನ್ಸ್ ಎತ್ತಳೋ ಇತ್ತ್.

"ಹೋಗಮ್ಮಾ ನಾನ್ ಹೇಳ್ತಾ ಇದ್ದರೆ ನೀನ್ ಎಂತದ್ದೋ ಗ್ಯಾನ ಮಾಡ್ತಾವಳಾ ನಾನ್ ಹೇಳ್ದುಲೆ"ತ ಮುಖ ಊದಿಸಿತ್.

"ಇಲ್ಲೆಪ್ಪಾ ಹೇಳ್ ಕೇಳ್ತಾವಳೆ"

"ಊಹುಂ, ಬ್ಯಾಡ, ನಿಂಗೆ ಇಂದ್ ತಲೆ ಬ್ಯಾನೆ ಅಲಾ, ನೀನ್ ಮಲ್ಕ ನಾನ್ ಹೋಂವರ್ಕ್‌ನ ಮಾಡ್ನೆ"

"ಸರಿ ಹಂಗೇ ಮಾಡಪ್ಪಾ" ತಲೆ ಸವರಿ ಕಳ್ಸಿತ್.

ಅವನ ಕಣ್ಣ್ ತುಂಬಾ ನೋಡ್ತ್. ಎಂತಹ ಕಟುಕ ಮನ್ಸ್ ಆಗಿರ್‍ದು. ಇಂತ ಕಂದನ ಬುಟ್ಟ್ ಹೋಗೊಳಲ್ಲಾ. ಈಗ ಡೈವೋರ್ಸ್‌ನ ನೋಟೀಸ್ ಕಳ್ಸಿವಳಲ್ಲಾ. ಬೆಳ್ಳಗಿರ್‍ದೆಲ್ಲಾ ಹಾಲ್‌ತ ನಂಬಿದಕ್ಕೆ ತಕ್ಕ ಪ್ರಾಯಶ್ಚಿಯ ಆತ್. ಈ ಕಂದಂಗೆ ಎಂತತ ಹೇಳಲಿ? ಎಷ್ಟ್ ದಿನಾತ ನಾಳೆ ಬಂದವೆ, ನಾಳೆ ಬಂದವೆ, ರಜ ಇಲ್ಲೆತ ಸುಳ್ಳ್ ಹೇಳ್ದು.

ನೆನ್ಸ್‌ತಿದ್ದಂಗೆ ಅವ್ಳ ಮನ್ಸ್ ಕಠಿಣವಾಗ್‌ತ್ತಿತ್ತ್. ಹೆಂಗೂ ತನ್ನ ಕಾಲ್ ಮ್ಯಾಲೇ ತಾನ್ ನಿತ್ತೊಳೆ. ಈ ಕಂದ ತನಿಗೆ ಭಾರವಾದುಲೆ. ಅವ್ನೆ ಬುದ್ದಿ ಕಲ್ಸದಿದ್ದರೆ ತನ್ನ ಬಾಳ್ ವ್ಯರ್ಥ. ದಿವ್ಯಂಗೆ ಛಲ ಹುಟ್ಟಿತ್. ತನ್ನ ಬಾಳ್‌ನ ಮೂವತ್ತ್ ವರ್ಷಗಳ್‌ಲಿ ಏನೆಲ್ಲಾ ಆಗಕಾಯ್ತೊ ಅದೆಲ್ಲಾ ಆಗಿತ್ತ್. ಒಟ್ಟಿಗೆ ಏನೆಲ್ಲಾ ಆಗಬಾರ್‍ದಿತ್ತೊ ಅದೆಲ್ಲಾ ಆಗಿ ಹೋಗಿತ್ತ್. ಗ್ಯಾನ ಮಾಡ್ತಿದಂಗೆ ಅವ್ಳ ಮನ್ಸ್ ಹಿಂದಕ್ಕೆ ಓಡ್ತ್.

* * * * *

ರಾಮಯ್ಯನವರ್ದ್ ತುಂಬಿದ ಸಂಸಾರ. ತನ್ನ ನಾಲ್ಕ್ ಮಕ್ಕ ಅಪ್ಪ ಅವ್ವ ಸೇರಿ ದೊಡ್ಡ ಸಂಸಾರ ಆಗಿತ್ತ್. ರೆವಿನ್ಯೂ ಇಲಾಖೆಲಿ ಗುಮಾಸ್ತರಾಗಿದ್ದ ರಾಮಯ್ಯನವು ನಿವೃತ್ತರಾದ ಮ್ಯಾಲೆ ತಮ್ಮ ಪಾಲಿಗೆ ಬಂದ ತೋಟಗದ್ದೆಗಳ್ನ ನೋಡಿಕಂಡ್ ಮನೆಲೇ ಇದ್ದೊ. ಇರಿಕೆ ಮನೆ ಇತ್ತ್. ತೋಟ ಗದ್ದೆಂದ ಜಾಸ್ತಿ ಉತ್ಪತ್ತಿ ಇಲ್ಲದಿದ್ದರೂ ಅವರ ಪೆನ್ಸನ್ ಹಣಂದ ಹಂಗೂ ಹಿಂಗೂ ಸಂಸಾರ ಸಾಗ್‌ತಿತ್ತ್. ಮಕ್ಕ ಇಪ್ಪತ್ತ್ ವಯಸ್ಸ್ ಒಳಗೆ ಇದ್ದೊ. ಮಕ್ಕ ಸಣ್ಣವು ಇರ್ಕನ ಯಾವ ತೊಂದರೆಯೂ ಇತ್ತ್‌ಲೆ. ಆದರೆ ಅವು ಬೆಳ್ದ್ ದೊಡ್ಡವು ಆಗಿ ಸ್ಕೂಲ್‌ಗೆ ಹೋಕೆ ಆದ ಮ್ಯಾಲೆ ಅವರ ಬೇಡಿಕೆಗ ಹೆಚ್ಚ್‌ತ್ತಿದ್ದೊ. ಒಬ್ಬರ ಬೇಡಿಕೆ ಪೂರೈಸ್‌ಕನ ಇನ್ನೊಬ್ಬಂದ್ ಶುರು ಆಗ್ತಿತ್ತ್. ರಾಮಯ್ಯನವ್ಕೆ ಸಾಕಪ್ಪಾತ ಅನ್ಸಿಬುಟ್ಟಿತ್.

ದೊಡ್ಡಂವ ಕೃಷ್ಣ ಪಿ.ಯು.ಸಿ. ಪಾಸಾಕನ ಅವ್ಕೆ ಏನೋ ಒಂತರಾ ಖುಷಿ. ತಮಿಗೆ ಮುಂದೆ ಸಹಾಯ ಮಾಡ್ದುತ ಗ್ಯಾನ ಮಾಡಿದ್ದೊ. ಆದರೆ ಕಾಲೇಜಿಗೆ ಸೇರ್ದ ಕೃಷ್ಣ ಪೋಲಿ ಹೈದಗಳ ಸಹವಾಸಂದ ಮನೆಯವ್ಕೆ ಗೊತ್ತಾಗದಂಗೆ ಅಂವ ಕೆಟ್ಟ ಚಾಳಿಗಳಿಗೆ ಬಲಿಯಾಗಿತ್ತ್. ಅವನ ಚಟಗ ಕಳ್ಳತನ ಮಾಡ್‌ವಲ್ಲಿಗೆ ಮುಂದ್‌ವರ್ದ್ ರಾಮಯ್ಯನವ್ಕೆ ವಿಷ್ಯ ತಿಳ್ದ್ ಅವು ಬೆಚ್ಚಿಬಿದ್ದೊ. ತಾವು ಕಟ್ಟಿದ ಕನಸ್‌ನ ಗೋಪುರ ಪುಡಿಯಾತ್‌ತ ಕಂಗೆಟ್ಟ್ ಹೋದೊ. ಗ್ಯಾನ ಮಾಡಿ ಮಾಡಿ ಅವು ಹಾಸಿಗೆ ಹಿಡ್ದೊ. ಮನೆನ ಸ್ಥಿತಿ ಚಿಂತಾಜನಕ ಆಗಿಹೋತ್. ಸಂಸಾರದ ಜವಾಬ್ದಾರಿನ ಹೊರುವ ಹೊಣೆ ಈಗ ಹಿರಿಯ ಮಗಳ್ ದಿವ್ಯನ ಪಾಲಿಗೆ ಬಾತ್.

ಅವ್ಳಿಗೆ ದೂರದ ನೆಂಟರ ಸಹಾಯಂದ ಖಾಸಗಿ ಕಂಪೆನಿಲಿ ಕೆಲ್ಸ ಸಿಕ್ಕಿತ್ತ್. ರಾಮಯ್ಯನ ಪೆನ್ಸನ್, ದಿವ್ಯನ ಸಂಬಳ ಸೇರಿ ಅವರ ಜೀವನ ಸಾಗ್‌ತಿತ್ತ್. ಕೃಷ್ಣ ಪೂರಾ ಕೆಟ್ಟ್ ಹೋಗಿತ್ತ್. ಅಂವ ಕಾಲೇಜಿಗೆ ಸರಿಯಾಗಿ ಹೋಗ್ತಿತ್‌ಲೆ. ಹೊತ್ತ್ ಗೊತ್ತಿಲ್ಲದೆ ಮನೆಗೆ ಬಾತಿತ್ತ್. ಬಂದರೂ ಮನೆಂದನೇ ದುಡ್ಡ್ ಕದ್ದ್‌ಕಂಡ್ ಹೋಗ್ತಿತ್ತ್.

ಒಮ್ಮೆ ದಿವ್ಯ ತನ್ನ ಸಂಬಳ ದುಡ್ಡ್‌ನ ಪೆಟ್ಟಿಗೆಲಿ ಮಡ್ಗಿ ಕಾಫಿ ಕುಡಿಯಕೆ ಅಡ್ಗೆ ಮನೆಗೆ ಹೋತು. ಕೃಷ್ಣ ಅಲ್ಲಿ ಕುದ್ದ್ ಕಾಫಿ ಕುಡಿಯತಿತ್ತ್. ಅಕ್ಕನ ಕಾಂಬಕನ ಹೆದ್ರಿ ಹೊರಗೆ ಬಾತ್. ಅವ್ಳ ಪ್ರಾಮಾಣಿಕ ಕಣ್ಣ್‌ಗಳ್ನ ಎದುರ್ಸಿಕೆ ಅವಂಗೆ ಧೈರ್ಯ ಇತ್ತ್‌ಲೆ.

ಅಷ್ಟೊತ್ತಿಗೆ ಅಪರೂಪದ ನೆಂಟರ್ ಮನೆಗೆ ಬಂದೊ. ದಿವ್ಯ ಅವರ್ನ ಮಾತಾಡ್ಸಿ ಆದ ಮ್ಯಾಲೆ ಅಡಿಗೆ ಮಾಡಿಕೆ ಒಳಗೆ ಹೋತ್. ನೆಂಟರ್ ಅಂದ್ ಉಳ್ದ್ ಮಾರನೇ ದಿನ ಹೊರ್ಟು ಹೋದೋ. ಅವು ರಾಮಯ್ಯನವರ ಕಡೆ ನೆಂಟರಾಗಿದ್ದ್ ಉಸಾರಿಲ್ಲದ ಅವರ್ನ ನೋಡಿಕೆ ಬಂದಿದ್ದೊತ ಹೇಳ್ದೊ.

ದಿವ್ಯ ಆಫೀಸಿಗೆ ಹೊರ್ಟತ್. ಬಸ್‌ಗೆ ದುಡ್ಡ್ ತೆಗೆಯಕೆತ ಪೆಟ್ಟಿಗೆ ತೆರ್‍ಯಕನ

ಅವ್ಳ ಎದೆ ಧಸಕ್ ತೇಳ್ತ್. ಒಂದ್ ತಿಂಗ ಬೆವ್ರು ಸುರ್ಸಿ ದುಡ್ದ್ ಸಂಪಾದಿಸಿದ್ದ ದುಡ್ಡ್ ಮಾಯ ಆಗಿತ್ತ್. ತಕ್ಷಣ ಅವ್ಳು ಕಿರ್ಚಿಕಣ್ತ್. ಆದರೆ ಅವ್ಳ ದುಡಿಮೆನ ಫಲ ಆಗಲೇ ಕೃಷ್ಣನ ಬಳಗಲಿ ಹಂಚಿ ಹೋಗಿತ್ತ್‌ತ ಅವ್ಳಿಗೇನು ಗೊತ್ತ್.

ನಿನ್ನೆ ಬಂದಿದ್ದ ನೆಂಟರ್ ಇಂದ್ ಮಾಯ ಆಗಿರ್ವ ಕೃಷ್ಣ. ಮನೆ ಖರ್ಚ್‌ನ ಜವಾಬ್ದಾರಿ – ಎಷ್ಟೋ ಯೋಚನೆಗ ಅವ್ಳ ತಲೆಲಿ ತುಂಬಿಕಂಡೊ.

ಒಂದ್ ವಾರ ಕಳ್ದಿತ್ತ್. ರಾಮಯ್ಯನವ್ಕೆ ಫೋನ್ ಬಾತ್. ಕಳ್ದವಾರ ಬಂದಿದ್ದ ನೆಂಟರ್ ಫೋನ್ ಮಾಡಿದ್ರೊ. ತಮಿಗೆ ದಿವ್ಯನ ನೋಡಿ ಬಾಳಾ ಕುಶಿ ಆಗುಟ್ಟು. ತಮ್ಮ ಮಂಜಗೆ ತಂದ್‌ಕಂಬಕೆ ಆಶೆ ಉಟ್ಟುತ ಹೇಳಿ, ಸಬ್ ಇನ್ಸ್‌ಪೆಕ್ಟರಾಗಿರ್ವ ತಮ್ಮ ಮಂಜನೇ ದಿವ್ಯನ ನೋಡಿಕೆ ಕಳ್ಸಿದಾಗಿ ತಿಳ್ಸಿದ್ರೊ. ದಿವ್ಯಂಗೆ ತಕ್ಷಣ ಗ್ಯಾನ ಬಾತ್. ಹಿಂದೆ ಒಮ್ಮೆ ತನ್ನ ಆಫೀಸ್‌ಲಿ ಕಳ್ಳತನ ಆಗಿರ್ಕನ ಬಂದಿದ್ದ ಆ ತರುಣ ಸಬ್ ಇನ್ಸ್‌ಪೆಕ್ಟರ್‌ನ ಮುಖ ಕಣ್ಣ್ ಮುಂದೆ ತೇಲಿ ಬಾತ್. ದಿವ್ಯ ಅಂದೇ ಅವನ ನೋಟನ ಗಮನಿಸಿದ್ದರೂ ಅದನ್ನ ಮರ್ತ್ ಬುಟ್ಟಿತ್ತ್.

ಮುಂದೆ ಕೆಲವೇ ಸಮೆಲಿ ಇಬ್ಬರ ಮದ್ವೆ ನಡ್ದ್ ಹೋಗಿತ್ತ್. ದಿವ್ಯ ಮೈಸೂರ್‌ಲಿದ್ದ್ ತನ್ನ ಆಫೀಸ್‌ನ ಬ್ರಾಂಚಿಗೆ ವರ್ಗ ಮಾಡ್ಸಿಕಂಡಿತ್ತ್. ಅವರ ಬಾಳ್‌ನ ರಥ ಏರುಪೇರಿಲ್ಲದಂಗೆ ಸಾಗಿತ್ತ್. ಪುಟ್ಟ ಆದಿತ್ಯ ಅವರ ಮಡಿಲ್‌ನ ತುಂಬಿತ್ತ್.

* * * *

ದಿವ್ಯ ನೆಟ್ಟಂಗೆ ಬಳ್ಳಾರಿ ಸೆಂಟ್ರಲ್ ಜೈಲಿಗೆ ಹೋಗಿ ಅಲ್ಲಿದ್ದ ಅಧಿಕಾರಿನ ಕಂಡ್ ಕೃಷ್ಣನ ವಿಚಾರ್ಸಿತ್. ಕೃಷ್ಣನ ಕಾಂಬಕನ ಅವ್ಳಿಗೆ ತಿಳಿಯದಂಗೆ ಅವ್ಳ ಕಣ್ಣ್‌ಂದ ಹನಿಗ ಜಾರಿದೊ. ಗಟ್ಟಿಮುಟ್ಟಾಗಿದ್ದ ಅಂವ ಲಾಚಾರಾಗಿ ಮೂಳೆ ಚಕ್ಕಳ ಆಗಿತ್ತ್. ಅವು ಮಾತಾಡಿಕಂಡಿದ್ದಂಗೆ ಅಲ್ಲೆ ದಾಟಿ ಹೋದ ಆ ವ್ಯಕ್ತಿನ ಕಣ್ಣರಳಿಸಿ ನೋಡ್ತ್ ದಿವ್ಯ. ಆದರೆ ಆ ವ್ಯಕ್ತಿ ಆಗಲೇ ದಾಟಿ ಹೋಗಿ ಆಗಿತ್ತ್.

ದಿವ್ಯ ವಾಪಾಸ್ ಹೊರ್ಡ್‌ಕನ ಕೃಷ್ಣ ಗಳಗಳತ ಮರ್ಬ್ ಬುಟ್ಟತ್. ಅವಂಗೆ ಈಗ ನಿಜವಾಗಿಯೂ ಪಶ್ಚಾತ್ತಾಪ ಆಗಿತ್ತ್. ಆದರೆ ಕಾಲಮಿಂಚಿ ಹೋಗಿತ್ತ್. ಮಾರನೇ ದಿನ ಮೈಸೂರಿಗೆ ಹೊರ್ಡಿಕೆ ಮುಂದೆ ಮತ್ತೆ ಬಂದ್ ಹೋನೆತ ಹೇಳಿ ದಿವ್ಯ ಹೊರ್ಟು ಬಾತ್. ಒಟ್ಟಿಗೆ ಆದಿತ್ಯನು ಇದ್ರಂದ ಅವ್ಳು ಜಾಸ್ತಿ ಹೊತ್ತ್ ಇತ್ತ್‌ಲೆ.

ಮಾರನೇ ದಿನ ಜೈಲ್ ಹತ್ರ ಹೋಕನ ಹಿಂದೆನ ದಿನ ಇದ್ದ ಅಧಿಕಾರಿಯೇ ಇದ್ದದ್ರಂದ ಅವಳ್ನ ಜಾಸ್ತಿ ಪ್ರಶ್ನೆ ಮಾಡದೆ ಕೃಷ್ಣನ ಹತ್ರ ಕಳ್ಸಿತ್. ಕೃಷ್ಣ ಇವಳಿಗಾಗಿಯೇ ಕಾದ್‌ಕಂಡ್ ನಿತ್ತಿತ್ತ್. ಇವಳ್ನ ಕಾಂಬಕನ ಅವನ ಮುಖ ಅರಳಿತ್ತ್. ದಿವ್ಯ ಆಶ್ಚರ್ಯಲಿ ನೋಡ್ತ್ ಹಿಂದೆನ ದಿನಕ್ಕಿಂತ ಇಂದ್ ಅಂವ

ಗೆಲುವಾಗಿ ಕಂಡಿತ್ತ್. ಕುಶಿಲಿ ಮಾತಾಡ್ತ್.

ಕೃಷ್ಣನೊಟ್ಟಿಗೆ ಮಾತಾಡಿ ಇನ್ನ್ ಹೊರ್ಡಕುತೇಳ್ಕನ ಜವಾನ ಬಂದ್ "ಸಾಹೇಬರ್ ಕರ್ದವೆ"ತ ಹೇಳ್ತ್. ಕೃಷ್ಣನ ವಿಷ್ಯ ಮಾತಾಡಿಕೆ ಇರ್ದುತ ದಿವ್ಯ ಅವನ ಹಿಂದೆ ಹೊರ್ಟತ್.

ಆದಿತ್ಯ ಅವ್ಳ ಹಿಂದೇ ಇತ್ತ್. ಜವಾನ ಸಾಹೇಬರ ಚೇಂಬರ್‌ವರೆಗೆ ಬಂದ್ ಒಳಗೆ ಹೋಗಿತ ಕೈ ತೋರ್ಸಿ ಹಿಂದೆ ಬಾತ್. ದಿವ್ಯ ಒಂದು ಗಳಿಗೆ ಅಲ್ಲೆ ನಿತ್ತ್ ಬುಡ್ತ್ ಎಂತ ಕೇಳಿವೆಯೋ ಏನೋತ. ಆದರೆ, ಆದಿತ್ಯ ಆಗಲೇ ಒಳಗೆ ಹೋಗಿ ಆಗಿತ್ತ್.

ಒಳಗೆ ಹೋದ ದಿವ್ಯ ಒಮ್ಮೆಗೇ ಬೆಚ್ಚಿಬೀತ್. ಆದಿತ್ಯನ ಆ ಅಧಿಕಾರಿ ಎತ್ತಿಕಂಡ್ ತೊಡೆ ಮ್ಯಾಲೆ ಕೂರ್ಸಿಕಂಡ್ ಮುದ್ದ್ ಮಾಡ್ತಿತ್ತ್. ಇವಳ್ನ ಕಂಡಂಗೆ ಆದಿತ್ಯನ ಎತ್ತಿಕಂಡೇ ಅವ್ಳ ಹತ್ರ ಬಾತ್.

"ಆನಂದ್........" ದಿವ್ಯಂದ ಉದ್ಗಾರ ಹೊರ್ಟತ್.

"ದಿವ್ಯ, ದಯವಿಟ್ಟ್ ನನ್ನ ಕ್ಷಮ್ಸಿ ಬುಡ್. ವಿಷ್ಯ ತಿಳಿಯದೆ ದುಡ್ಕಿ ತಪ್ಪು ಮಾಡಿಬುಟ್ಟೆ. ನಿನ್ನ ಮ್ಯಾಲೆ ಸಂಶಯ ಪಟ್ಟ್ ಬುಟ್ಟೆ. ನಂಗೆ ಎಲ್ಲಾ ವಿಷ್ಯ ತಿಳ್ತ್. ಅಂದ್ ನೀನಾರ ಹೇಳಕ್ಕಾಗಿತ್ತ್."

"ಒಬ್ಬ ಕೊಲೆಗಾರನ ನನ್ನ ತಮ್ಮತೇಳಿಕೆ ಮನ್ಸ್ ಬಾತ್‌ಲೆ. ಅಲ್ಲದೆ, ನೀವ್ ಅವ್ನ ಹುಡ್ಕುತ್ತಿದ್ದರಿ ಅಲ್ಲಾ. ನಾನೇ ಹಿಡ್ದ್‌ಕೊಟ್ಟಂಗೆ ಆದೆತ ಸುಮ್ಮನಾದೆ" ತೇಳಿ ಅಲ್ಲೇ ಇದ್ದ ಕುರ್ಚಿಲಿ ಕುದ್ದ್ ಮರ್ಡಿಕೆ ಸುರ್ ಮಾಡ್ತ್. ಇಷ್ಟ್ ದಿನ ತಡ್ದ್ ಕಂಡಿದ್ದ ಕಣ್ಣೀರ್ ಹೊಳೆಯಾಗಿ ಹರ್ತ್. ಅವ್ಳ ಹತ್ರ ಕುದ್ದ್ ಆನಂದ್ ಅವ್ಳ ದುಃಖ ಕಮ್ಮಿಯಾಕೆ ಮುಟ್ಟ ಅವ್ಳ ತಲೆನ ಸವರ್ತಾ ಇತ್ತ್. ಪುಟ್ಟ ಆದಿತ್ಯ ಏನೂ ಅರ್ಥವಾಗದೆ ಪಿಳಿ ಪಿಳಿ ಕಣ್ಣ್ ಬುಟ್ಟ್ ನೋಡ್ತಿತ್ತ್.

* * * * *

ಹಿಂದೆನ ದಿನ ತಾನೆ ಜೈಲ್ ಸೂಪರಿಂಟೆಂಡೆಂಟ್ ಆಗಿ ಚಾರ್ಜ್ ತಗಂಡಿದ್ದ ಆನಂದ್ ಆ ಖೈದಿನ ಕಂಡ್ ರೋಷಲಿ ಹಲ್ಲ್ ಕಚ್ಚಿತ್ತ್. ತಮ್ಮ ಸುಂದರ ಬದುಕುಲಿ ವಿಷ ಬಿಂದುವಾಗಿ ಬಂದಿದ್ದ ವ್ಯಕ್ತಿ ಅದೂ ಖೈದಿಸ್ಥಾನಲಿ!

ಸ್ವಲ್ಪ ಹೊತ್ತಿಗೆಲ್ಲಾ ಅಲ್ಲಿಗೆ ಬಂದ ದಿವ್ಯನ ಕಂಡ್ ಸಿಟ್ಟ್‌ಲಿ ಅಲ್ಲಿಂದ ಹೊರ್ಟ್ ಹೋಗಿತ್ತ್. ದಿವ್ಯ ಹೊರ್ಟು ಹೋದ ಮ್ಯಾಲೆ ಕುತೂಹಲಂದ ಆ ಖೈದಿನ ಕರ್ದ್ ವಿಚಾರಣೆ ಮಾಡ್ತ್. ನಿಜಸ್ಥಿತಿ ತಿಳ್ದ್ ತನ್ನ ಅವಿವೇಕಕ್ಕೆ ತಾನೇ ಅಸಹ್ಯ ಪಟ್ಟ್‌ಕಣ್ತ್. ತನ್ನ ಆತುರದ ನಿರ್ಧಾರಂದ ತನ್ನ ಬಾಳ್‌ನ ತಾನೇ ಹಾಳ್ ಮಾಡಿಕಂಡಿತ್ತ್.

ಮಾರನೇ ದಿನ ದಿವ್ಯ ಮತ್ತೆ ಬಂದದೆತ ತಿಳ್ದ್ ಕುಶಿಲಿ ತನ್ನ ತಪ್ಪುನ ಒಪ್ಪಿಕಣಿಕೆ ಸಿದ್ಧನಾಗಿ ಕುದ್ದಿತ್ತ್.

ಆನಂದ್ ಮತ್ತೆ ಹೇಳ್ತ್ "ನಾ ತಪ್ಪು ಮಾಡಿಬುಟ್ಟೆ"ತ ಪಶ್ಚಾತ್ತಾಪಲಿ, "ತಪ್ಪು ನನ್ನದೆ, ಅಂದ್ ಕೊಲೆಗಾರನ ತಮ್ಮತೇಳಿಕೆ ನನ್ನ ಸ್ವಾಭಿಮಾನ ಅಡ್ಡ ಬಾತ್"

"ನಿಮ್ಮಿಬ್ಬರ ಬಾಳ್‌ನ ಹಾಳ್ ಮಾಡ್ದ ಈ ಪಾಪಿನ ಕ್ಷಮಿಸಿ ಬುಡಿ" ತೇಳ್ತ್ ಆಗತಾನೆ ಒಳಗೆ ಬಂದ ಕೃಷ್ಣ. ಅಂವ ಅಕ್ಕ ಭಾವನ ಕಾಲಿಗೆ ನಮಸ್ಕಾರ ಮಾಡ್ತ್.

ಮತ್ತೆ ಇನ್ನ್ ಎಂದೂ ಇಂತಹ ಕೆಟ್ಟ ಕೆಲ್ಸ ಮಾಡ್ದುಲೆ. ನನ್ನ ಶಿಕ್ಷೆ ಮುಗ್ದ ಮ್ಯಾಲೆ ಹೊಸ ಮನ್ಸನಾಗಿ ಬಾಳ್ನೆತ ಕೃಷ್ಣ ಆಣೆ ಮಾಡಿ ಹೇಳ್ತ್.

"ಇನ್ನ್ ಸ್ವಲ್ಪ ದಿನ ದಿವ್ಯ. ನೀನ್ ಕೆಲ್ಸ ಬುಟ್ಟ್ ಬಂದ್‌ಬುಡ್. ನೀನ್ ಇಷ್ಟ್ ದಿನ ಒಂಟಿಯಾಗಿ ಕಷ್ಟಪಟ್ಟದ್ ಸಾಕ್"

"ಸರಿ" ತೇಳ್ತ್ ದಿವ್ಯ ಅವ್ಳಿಗೂ ಒಂಟಿಬಾಳ್ ಸಾಕಾಗಿ ಹೋಗಿತ್ತ್.

"ಇಂದ್ ಇಲ್ಲೇ ಇರಿ, ನಾಳೆ ರಜ ಹಾಕಿ ಎಲ್ಲವೂ ಹೋಗಿ ನಿನ್ನ ಸಾಮಾನ್ನೆಲ್ಲಾ ತಂದ್‌ಬುಡ್ನೊ. ಹಂಗೆ ರಾಜೀನಾಮೆ ಪತ್ರನ ರೆಡಿ ಮಾಡಿ ಬುಡ್" ದಿವ್ಯಂಗೆ ಎಲ್ಲಾ ಅಯೋಮಯ ಆಗಿತ್ತ್. ಅವ್ಳ ಎಲ್ಲಕ್ಕೂ ತಲೆ ಆಡ್ಸ್‌ತ್ತಿತ್ತ್.

* * * * *

ಆನಂದ್‌ನ ಶಿಫಾರಸ್‌ಂದ ಸ್ವಾತಂತ್ರ್ಯ ದಿನಾಚರಣೆ ದಿನ ಕೃಷ್ಣಂಗೆ ಬಿಡುಗಡೆ ಆಗಿತ್ತ್. ಅವ್ನ ಬಿಡುಗಡೆ ದಿನ ದಿವ್ಯ ಆದಿತ್ಯ ಸಹ ಜೈಲ್ ಹತ್ರ ಹೋಗಿದ್ದೊ. ಆನಂದ್ ಕೃಷ್ಣಂಗೆ ಒಳ್ಳ ಡಾಕ್ಟರ್ ಹತ್ರ ಮದ್ದ್ ಕೊಡ್ಸಿದ್ರಂದ ಅಂವ ಈಗ ಉಸಾರಾಗಿತ್ತ್.

ಕುಶಿಲಿ ಜೈಲ್‌ಂದ ಜೊತೆ ಜೊತೆಲಿ ಜೈಲ್ ಗೇಟ್‌ನ ದಾಟ್‌ತಿದ್ದ ದಿವ್ಯ–ಆನಂದ ಮತ್ತೆ ಆದಿತ್ಯ–ಕೃಷ್ಣನ ಅಲ್ಲಿದ್ದ ಎಲ್ಲರ ಕಣ್ಣ್‌ಗ ಆಶ್ಚರ್ಯಲಿ ನೋಡುತಿದ್ದೊ.

✍ಕಟ್ರತನ ಲಲಿತಾ ಅಯ್ಯಣ್ಣ

ಗೌಳಿಬೀದಿ,
ಮಡಿಕೇರಿ.

ಕವನ ಜೊಂಪೆ

# ಶ್ರೀ ಭದ್ರಕಾಳಿ

ಶ್ರೀ ಭದ್ರಕಾಳಿ ನೆಲ್ಲೊಳ ನೀ ಹೊರಮಲೆ ನಾಡ್‌ಲಿ
ಅವ್ವ ಭದ್ರಕಾಳಿ ಪೊರ್ಲ್‌ನ ಹೆಸ್ರ್‌ಲಿ

ಹಚ್ಚ ಹಸ್ರ್‌ನ ಸ್ವರ್ಗಲಿ ಬೆಟ್ಟಗುಡ್ಡ ನಡೂನ ಪೊರ್ಲ್‌ಲಿ
ಅವ್ವ ನೆಲ್ಲೊಳ ನೀ ಲಾಯಕ್‌ನ ರೂಪಲಿ

ಎರಡ್ ವರ್ಷಕೊಮ್ಮೆ ನಡೆಯುವ ಹಬ್ಬಲಿ ಎಲ್ಲರ್ನ ನೀ ಒಂದುಗೂಡ್ಸಿಯ ಇಲ್ಲಿ
ಅವ್ವ ನೆಲ್ಲೊಳ ನೀ ಪುಣ್ಯದ ಮಣ್ಣ್‌ಲಿ

ಭಕ್ತರ ಕಾಯಕೆ ಕುದ್ದೊಳ ನೀ ಕಲ್ಲು ಗುಡಿಲಿ
ಶ್ರೀ ಭದ್ರಕಾಳಿ ನೆಲ್ಲೊಳ ನೀ ಹೊರಮಲೆ ನಾಡ್‌ಲಿ

ಅವ್ವ ಸತ್ಯ-ಧರ್ಮ‌ನ ಉಳ್ಸೊಳ ನೀ
ಅವ್ವ ನಾವ್ಗಳ ಕಷ್ಟನ ಪರಿಹಾರ ಮಾಡಿಯ

ಬೇಡ್ದ ಸುಖ-ಶಾಂತಿ ಭಾಗ್ಯನ ಕೊಟ್ಟಿಯ
ಹರಕೆ ಕಾಣಿಕೆನ ಭಕ್ತರ್ ತಂದ್ ನಿಂಗೆ ಒಪ್ಪುಸುವೆ

ತಪ್ಪುನೆಲ್ಲ ಒಪ್ಪುಮಾಡ್‌ತೇಳಿ ನಿಂಗೆ ಕೈ ಮುಗ್ದವೆ
ಶ್ರೀ ಭದ್ರಕಾಳಿ ನೀ ನೆಲ್ಲೊಳ ಈ ಕೊಡಗ್‌ಲಿ ಅವ್ವ ಭದ್ರಕಾಳಿ ಪೊರ್ಲ್‌ನ ಹೆಸ್ರ್‌ಲಿ

✍ ಕೊಕ್ಕಲೇ ಮಾಲಿನಿ ಮುತ್ತಪ್ಪ

ಹೆರವನಾಡು ಗ್ರಾಮ
ಅಪ್ಪಂಗಳ ಅಂಚೆ
ಮಡಿಕೇರಿ ತಾ - 571201

# ಮಳೆ

ಆಡಾಡ್ತಾ ಓಡ್ತಾ ತೇಲ್‌ತಾ ಬರ್‌ವ ಮೋಡ
ಮಳೆ ಸೂಚನೆ ತಂದದೆ ಕರಿ ಮೋಡ॥
    ಗುಡುಗು ಸಿಡ್‌ಲ್‌ನ ಆರ್ಬಟಕೆ ಘರ್ರ್–ಂತೇಳಿ
    ಭೂಮಿ ಅದ್‌ರಿ ನಡ್‌ಗಿದ ಸದ್ದಿಗೆ
ಮನೆ ಗ್ವಾಡೆಗಳ್‌ಲಿ ಬಿರ್‌ಕ್ ಬಂದ್
ಮಳೆ ನೀರ್ ತುಂಬಿ ಕ್ವಾಂಬರೆ ಕೆರೆ ಆತ್॥
    ಅದ್‌ರ್‌ನ ನೋಡಿಕೆ ಬಂದ ಜನ ಹೇಳ್ದೊ ನೋಡಿ
    ಸಿಮೆಂಟ್ ಕೆಲ್‌ಸಾ ಸರಿಯಿಲ್ಲೆತ್ತೇಳಿ
ರಸ್ತೆ ಸೇತುವೆ ತುಂಬಿ ದಾಟಿಕೆ ದಾರಿ ಇಲ್ಲದಾತ್
ಜೆನಕೆ ದಾಟಿಕೆ ದೋಣಿ ಬೇಕಾತ್॥
    ನಿನ್ನೆನು ಮೊನ್ನೆನು ಹೂ ಬಿಸ್‌ಲಿತ್ತ್–ಭೂಮಿಗು ಬಾನಿಗು ಮಧ್ಯ
    ರಂಗ್‌ನ ಕಾಮನಬಿಲ್ಲ್ ಕಾಂಬತಿತ್ತ್ ॥
ಹೊಸ ನಕ್ಷತ್ರ ಮಳೆ ಬರ್‌ವಾ...ಲಕ್ಷಣ ಅದ್‌ಕೆ
ಸೂಂಯ್ ಗಾಳಿನ ಸೂಚನೆಯಿತ್ತ್॥
    ರೈತಂಗೆ ಎಚ್ಚ್‌ರಿಕೆ ಏನ್‌ಂತೇಳ್ರೆ
    ಜಡಿ ಮಳೆ ಬಂದ್ ಬರೆಸಾಲ್ ಜರ್‌ದರೆ ॥
ಅಗೆಗದ್ದೆ ಮುಚ್ಚಿರೆ! ನಾಟಿ ಸಾಲ್ ಕೊಚ್ಚಿ ಹೋದರೆ
ತಿಂಬದು ಎಂತದ್‌ತ ಗ್ಯಾನ ಅವಂಗೆ ॥
    ಅರ್ಜಿನು ಕೊಟ್ಟಾತ್ ಆಫೀಸಿಗೆ
    ಸರ್ಕಾರ ಸಾಲ ಮನ್ನಾ ಮಾಡ್ದೆ..ನಾ?
ಬಿರ್‌ಗಾಳಿಗೆ ಮರಗ ಬಿದ್ದ್ ಕಾಪಿ ತ್ವಾಟ ಹೊಡಿ ಆತ್
ಕಾಪಿ ಎಲೆ ಕರ್‌ಗಿ ಗೊಬ್ಬರ ಆತ್॥
    ಮಳೆಗಾಳಿಗೆ ಬಿದ್ದ್ ಕರೆಂಟ್ ಕಂಬ ತುಂಡಾತ್
    ನಗರನೆ ಕತ್ತಲೆ! ಇನ್ನ್ ಹಳ್ಳಿಗೆ ಎಲ್ಲಿಂದ ಬೆಳ್‌ಕ್?॥
ಮುಂದೆನ ವರ್ಸದ ಫಸಲ್‌ನ ಗತಿಯೇನ್
ಇಂಗ್ಲೀಷ್ ಶಾಲೆಲಿ ಓದುವ ಮಕ್ಕಳ ಫೀಸ್‌ನ ಗತಿಯೇನ್?
    ಸಾಲಮನ್ನಾ ಸಿಕ್ಕುದಾತೇಳ್‌ವ ಕಾತರ ಅವಂಗೆ
    ಅದ್‌ಕೂ ನೂರೆಂಟ್ ತಕರಾರ್ ರೈತನ ಆರ್.ಟಿ.ಸಿ.ಗೆ
ಒಮ್ಮೆಗೆ ವಿದ್ಯುತ್ ಬಂದಂಗಾತ್ । ಢಂತೇಳಿ ಸದ್ದಾತ್
ಟಿ.ವಿ. ಸುಟ್ಟೋತು । ಟಿ.ವಿ. ಸುಟ್ಟೋತು ॥

✍ಬೈತಡ್ಕ ಜಾನಕಿ ಬೆಳ್ಯಪ್ಪ

#21–16, ರೇಸ್‌ಕೋರ್ಸ್ ರಸ್ತೆ,
ಎಲ್.ಐ.ಸಿ. ಹತ್ತಿರ, ಮಡಿಕೇರಿ
ಮೊ : 9008571899

# ಕೊಡ್‌ಗ್‌ನ ಪೊರ್ಲು

ಕಾವೇರಿ ಹುಟ್ಟಿದ ಹೆಮ್ಮೆನ ನಾಡ್
ಕಣ್ಣಿಗೆ ಖುಸಿ ಕೊಟ್ಟದೆ ಇಲ್ಲಿನ ಕಾಡ್
ಸಮ್‌ದಾನಲಿ ನೀನೊಮ್ಮೆ ಬಂದ್ ನೋಡು

ಘಮ, ಘಮ ಬಂದದೆ ತರತರದ ಹೂಗ
ಮನ್‌ಸ್ಸಿಗೆ ಖುಸಿ ಕೊಟ್ಟದೆ ಕಾಫಿ ಗಿಡಗ
ತೂಗಿ ನಿತ್ತುಟು ಭತ್ತದ ಕದ್‌ರ್‌ಗ

ಈ ಮಣ್ಣಿಗೆ ಬಿದ್ದದೆ ಬೇಕಾಗುವಷ್ಟ್ ಮಳೆ
ಅದಿಕ್ಕಾಗಿಯೇ ಘಮ ಘಮ ಬಂದದೆ ಏಲಕ್ಕಿ ಬೆಳೆ
ಇದೇ ಈ ಮಣ್ಣಿಗೆ ಒಂದು ಪೊರ್ಲುನ ಕಳೆ

ಹುತ್ತೇರಿ, ಕೈಲ್‌ಪೋದು ಆಚರಣೆನ ನಾಡ್
ಕುಪ್ಪಸ ದಟ್ಟಿ ಹಾಕಂಡ್ ಕೊಣ್ಣ್‌ದಾಡುವ ವೀರರ ಬೀಡ್
ಸಂಪ್ರದಾಯಸ್ಥರ ಹೆಮ್ಮೆನ ಈ ನಮ್ಮ ಕೊಡ್‌ಗ್

✍ ಉಳುವಾರನ ರೋಶನ್ ವಸಂತ್

ಕಾಂತೂರು ಗ್ರಾಮ
ಮೂರ್ನಾಡ್ ಅಂಚೆ
ಮೊ : 8861862035

# ನನ್ನವ್ವ

ಬೇಸಿಗೆ ರಜೆ ಬಾಕನ ಗೇನ ಆದೆ ನಂಗೆ
ನನ್ನವ್ವ ತಾತನ ಆ ಪ್ರೀತಿ ಗಂಗೆ
ಗೂಡ್‌ಂದ ಬುಟ್ಟ ಹಕ್ಕಿಗಳ ಹಾಂಗೆ
ಅವ್ವನ ಮನೆನೇ ಸ್ವರ್ಗ ಆಗಿತ್ತ್ ನಾವ್ಗೆ ॥

ಮಾಯ್ನಕಾಯಿ, ಹಲ್ಸಿನಕಾಯಿ ಎಷ್ಟ್ ಬೇಕಷ್ಟ್
ಗೇರ್ದಣ್ಣ್, ಬಾಳೆಹಣ್ಣ್ ಸಾಕಾಗುವಷ್ಟ್
ಅವ್ವ ಕೊಡ್ತಿದ್ದೊ ನಾವ್ಗೆ ಎಲ್ಲ ಕೇಳ್ದಂಗೆ
ತಿಂಬೊತಿದ್ದೊ ನಾವ್ ಬೇಕ್ ಬೇಕಾದಂಗೆ ॥

ಮಾವ, ಅತ್ತೆ ಚಿಕ್ಕಮ್ಮನೊಟ್ಟಿಗೆ ಹೋಗ್ತಿದ್ದೊ ಗುಡ್ಡೆಗೆ
ಕತ್ತಿ ಹಿಡ್ಕಂಡ್ ಹಿಂದೆಂದ ಸೊಪ್ಪು ಸೌದೆಗೆ
ಕಣ್ಣಚಾಯ ರೊಟ್ಟಿ ತಿಂದ್ ಬಾತಿದ್ದೊ ನಾವ್ ಅರ್ದಲಿ
ಬಿದ್ಕಂಡ್ ಎದ್ಕಂಡ್ ಹಾಕ್ಯಂಡ್ ಚಪ್ಪಲಿ ॥

ನನ್ನವ್ವ ಈಗ ಹೋಗೊಳೊ ಬಾರದಾ ಲೋಕಕೆ
ಯಾರಿಗೂ ಆಕಿಲೆ ಆ ಸ್ಥಾನ ತುಂಬಿಕೆ
ಪುಳ್ಳಿಗ ನಾವೆಲ್ಲ ಮಾಡ್ವೆ ಹಾರೈಕೆ
ಇನ್ನೊಂದು ಜನ್ಮಲಿ ಅವ್ವ ಆಗಿ ಬನ್ನಿ ನಮ್ಮ ಸಾಂಕಿಕೆ ॥

✍ ಪೂರ್ಣಿಮಾ ದಿನೇಶ್ ಅಂಬೆಕಲ್ಲು

ಶಿಕ್ಷಕಿ, ಸ.ಉ.ಹಿ.ಪ್ರಾ.ಶಾಲೆ, ಜಾಲ್ಸೂರು
ಸುಳ್ಯ ತಾಲೂಕು, ದ.ಕ.
ಮೊ : 9448782227
9448625269

# ಅರೆಭಾಷೆ ಆಶಯ

ಭಾಷೆ ಒಂದು ನೂರು ಆದ್ರ
ಭಾವ ಎಲ್ಲ ಒಂದೇಯಾ..
ದೇಶ ಗಡಿಯ ಗುರುತು ಎಲ್ಲ
ಮಾಜಿದರು ಒಂದೇಯಾ....

ಗಡಿಯ ಗುರುತು ಉಜ್ಜಿ ನಾವು
ಹೃದಯ ಕೂಡಿ ಬಾಳೋಕು
ಭಾಷೆ "ಗಂಧ" ಒಂದೇ ಆಗಿ
ನೆಲಗಟ್ಟು ಆಗೋಕು

ಮೇಲು, ಕೀಳು ಎಂಬ ರೂಪ
"ಧನದ" ರೂಪ ಪಡೆಕೆ ಬೊತ್ತು
ಬಂದರೇ.. ಬಂದರೇ..
ಅದುವೇ ನಮ್ಮ ನರಕವು
ನಾವ್ಗೆ ಅಲ್ಲ, ನಾಡಿಗಲ್ಲ, ದೇಶಕ್ಕೆಲ್ಲ ನರಕವು

ಭಾಷೆ ಬೊಳ್ಳಿ ಸೊಂಟಕೆಲ್ಲ
ನಮ್ಮ ಜನರು ಸುತ್ತೋಕು
ಮೇಲು ಕೀಳು ಶಬ್ದವನ್ನು
ಜಾಡ್ಸಿ ಒದ್ದು ಹಾಕೋಕು

ಕಾಲ ಇತ್ತು ಒಂದು ಕಾಲ
ಅರೆಭಾಷೆ ಶಬ್ದನ
ಕದ್ದು ಮುಚ್ಚಿ ಆಡ್ಕನ
ಬಾಯಿ ಪಸೆ ಆರಿ ಹೋಗಿ
ಮೋರೆ ಬಿಳ್ಚಿ ಹೋತಿತ್

ಎಷ್ಟು ಬೇಗ ಸರ್ದು ಹೋತ್
ಈ ಮರ್ಯಾದೆ ಬಾಕನ
ಎದೆ ಉಬ್ಸಿ ಅರೆಭಾಷೆ
ಹೆಮ್ಮೆಯಿಂದ ಹೇಳ್ಕನ

ನಾವ್ ರಾಯಭಾರೀಗ
ನೀವ್ ರಾಯಭಾರೀಗ
ಅರೆಭಾಷೆ ಅವ್ವಂಗೆ
ನಮ್ಮ ಎಲ್ಲರ ಕಾಣಿಕೆ

ಭಾಷೆ ನಮ್ಮ "ಸೊತ್ತು" ಅಲ್ಲ
ಈ ತಾಯಿ ಭೂಮೀಲೀ
ಬದುಕಿ ಬಾಳ್ವ ಜನರ ಮಿಡಿತ
ಹೃದಯಭಾಷೆ ಆಗಲಿ!
ಕಂಣ ಭಾಷೆ, ಬಾಯ ಭಾಷೆ ಎಲ್ಲಾದ್ರಲ್ಲಿ ಚಿಮ್ಮೊಲೀ

✍ ಉಮೇಶ ಬಿಳಿಮಲೆ

ಕಲ್ಮಕಾರು–574218
ಸುಳ್ಯ ತಾಲೂಕು
ದ.ಕನ್ನಡ

ಕತೆ ಅಥವಾ ಕವನ ಬರೆವ ಮಕ್ಕ ತಮ್ಮ ಇಸ್ಕೂಲ್‌ನ
ಮುಖ್ಯಸ್ಥರ್‌ಂದ ದೃಢೀಕರಿಸಿ ಕಳ್ಸಿಕೊಡಿ.

# ಬಳೆಶಾಸ್ತ್ರಕ್ಕೆ ಕರೆವ ಪದ

ಬಳೆಗಾರ್ತಿ ಬಾ... ಅವ್ವಾ ಮನೆಗೊಂದು ಗಳಿಗೆ ।
ಬಳೆಶಾಸ್ತ್ರ ಇಸ್ಕ್ಯೋಳೊ ಮನೆ ಮಗಳಿಗೆ ॥
ಬಳೆಶಾಸ್ತ್ರ ಇಲ್ಲದೆ ಪೊರ್ಲಿಲ್ಲೆ ಮೊದ್ವೆಗೆ ।
ತೊಡ್ಸವ್ವಾ ಬಳೆನಾ ಮೊದ್ವೆ ಗೂಡೆಗೆ.... ॥
॥ ಬಳೆಗಾರ್ತಿ ॥
ಗಂಗೆ ಗೌರಿನ ನೆನ್ದು ಬಳೆನಾ ಮಲ್ಹಾರಕೇ ।
ಅರ್ಸಿನ-ಕುಂಕುಮ ಹಚ್ಚಿ ಹೂವು ಅಕ್ಷತೆ ಹಾಕಿ॥
ಎಲೆಡಿಕೆ ದಕ್ಷಿಣೆ ಕೊಟ್ಟೂ... ಗಂಧ ಧೂಪನ ತೋರ್ಸಿ ।
ಪೂಜೆನಾ ಪೊರ್ಲ್‌ಲಿ ಮಾಡಿ... ಹೆಣ್ಮಕ್ಕ ಕೈನಾ ಮುಗ್ದವೇ॥
॥ ಬಳೆಗಾರ್ತಿ ॥
ಬಲಕೈಗೆ ತುಂಬಾ ಪಚ್ಚೆ ಕೆಂಪು ಕುಪ್ಪಿನಾ ಬಳೆಗಳಾ ।
ದೃಷ್ಟಿಗೆ ..... ಗೌರಿ ಕರಿ ಬಳೆಗಳನಾ ಸೇರಿಸಿ ॥
ಚಿನ್ನದಾ... ಕಡಗನಾ ಒಂದೊಂದೇ ಏರಿಸಿ ।
ಎರಡೂ.. ಕೈಗೆ ತುಂಬಾ ಕುಪ್ಪಿನ ಬಳೆಗಳಾ ತೊಡ್ಸವ್ವಾ....॥
॥ ಬಳೆಗಾರ್ತಿ ॥
ಬನ್ನಿ ಗೂಡೆಗಳೇ, ಬನ್ನಿ ಹೆಮ್ಮಕ್ಕಳೇ...!
ಈ ಮನೆನಾ ಮಗಳ ಮದ್ವೆ ಜಂಬರಕೇ....॥
ಬಂದ್ ನೀವೂ ಕೈಯಾ ತುಂಬಾ ಬಳೆನಾ ತೊಟ್ಕಂಡ್ ।
ತುಂಬಿ ಬಂದಾ ಕುಸಿಂದ ಮದ್ವೆ ಗೂಡೆನಾ ಹರ್ಸಿ...॥
॥ ಮದ್ವೆ ಗೂಡೆನಾ ಹರ್ಸಿ.... ಮದ್ವೆ ಗೂಡೆನಾ ಹರ್ಸಿ....॥

✍ ಶೀಲಾ ಸೀತಾರಾಂ

**ಶೀಲಾ ಸೀತಾರಾಮ್**
**W/o ಸೀತಾರಾಮಗೌಡ**
**'ಸ್ಪಂದನ'**
**III ನೇ ವಾರ್ಡ್, 238/2**
**ಬ್ರಾಹ್ಮಣರ ಹಾಸ್ಟೆಲ್ ಬಳಿ,**
**ಜೆ.ಸಿ. ರೋಡ್, ಸುಳ್ಯ, ದ. ಕನ್ನಡ**

# ರೊಟ್ಟಿ ಕತೆ

ರೊಟ್ಟಿನು ಪಜ್ಜಿನು ಒಟ್ಟಿಗೆ ಕೂಡಿ
ಗದ್ದೆಗೆ ಪೋಯಿತ ಗುಟ್ಟಾಗಿ ಮಾತಾಡಿ
ಕೆಂಡಲಿ ಕಾದ ಪೊಕ್ಕಳ ರೊಟ್ಟಿ
ಚೆಂಬುಲಿ ತುಂಬಿದ ಬಿಸಿ ಬಿಸಿ ಕಾಫಿ

ನಮ್ಮನ ಯಾರು ಕಾಂಬದು ಬ್ಯಾಡತ
ವಾಲೆಪಚ್ಚೆ ಒಳಗೆ ಅಡ್ಂಗಿ ಕುದ್ದೊ
ಪಚ್ಚೆನ ಹಿಡ್ದ್ ಗ್ವರ್ಗನ ಹಾಕಿ
ಗದ್ದೆ ಕಡೆಗೆ ಅವು ಹ್ವರ್ಟ್ ನಡ್ದೊ.

ಅವ್ವನ ಮಾತ್ನ ಕೇಳ್ದ ಚಾಮಿ
ಪಿರಿಪಿರಿ ಮಳೆಲೆ ಹ್ವರ್ಟತ್ ಒಟ್ಟಿಗೆ
ಅವ್ವನ ಒಟ್ಟಿಗೆ ಹ್ವದರೆ ಗದ್ದೆಗೆ
ಅಪ್ಪ ಕೊಟ್ಟವೆ ಹಂಙ್ಞ ಬಿಸಿರೊಟ್ಟಿ

ಪುಣಿಮ್ಯಾಲೆ ಅಪ್ಪ ಹಾಕಿದೊ ಆಗ
ಚೋಮಂಗು ಪಟಯಂಗು ಬಿಳಿಗುಲ್ಲು
ಅವ್ವ ಕೊಡುವ ಅರ್ಧರ್ಧ ರೊಟ್ಟಿಗೆ
ಎತ್ತ್‌ಗ ಎರಡ್ ಕಾಯಿತಿದ್ದೊ

ಹೂಡುವ ಎತ್ತ್‌ಗೆ ಹೇಳ್ವ ರಾಗ
ಹರ ಹರ ಹೀ ಸಂಗೀತದ ಭಾಗ
ಅಪ್ಪನ ರಾಗಕ್ಕೆ ಎತ್ತ್‌ಗ ಹಾಕುವ
ಜೋಡಿ ಹೆಜ್ಜೆಲಿ ಕೂಡಿ ನಡೆಯುವ ಗಮ್ಮತ್

✍ಎಸ್.ಕೆ. ಈಶ್ವರಿ

**ಮೇಕೇರಿ ಗ್ರಾಮ,
ಕಗ್ಗೋಡ್ಲು ಅಂಚೆ,
ಮಡಿಕೇರಿ ತಾಲ್ಲೂಕು
ಮೊ : 9481370263**

# ಕೋರಿಕೆ

ಜನಾಂಗ ಬಾಂದವ್ರುಕೆ
ನನ್ನದೊಂದು ಪುಟ್ಟ ಕೋರಿಕೆ
ನಮ್ಮ ಭಾಷೆ ಮಾತಾಡ್ದುತೇಳ್ರೆ
ನಿಮಿಗ್ಯಾಕೆ ತುಂಬಾ ನಾಚಿಕೆ

ಮಕ್ಕಳಿಗೆ ಮನೇಲಿ ಕಲ್ಸುದುತ್ತೇಳ್ರೆ
ನಿಮಿಗೆ ತುಂಬಾ ಅಂಜಿಕೆ
ಖಂಡಿತಾ ಇದರ್‌ಂದ ಕಡಿಮೆಯಾದುಲೇ
ನಿಮ್ಮ ಶ್ರೀಮಂತಿಕೆ

ಎಷ್ಟೊ ಜನ ಹೋಗಿ ಬಂದರೂ
ಬೇರೆ ಬೇರೆ ದೇಶಕ್ಕೆ
ಎಂದೂ.. ಮರೆಯಲೇ ಹುಟ್ಟು ಭಾಷೆ ಮಾತಾಡಿಕೆ
ಅದ್... ಅದ್... ನಿಜವಾದ ಹೆಮ್ಮೆ ಗೌಡ ಜನಾಂಗಕ್ಕೆ

ಇಂತ ವಿಷಯಗಳ್ನ ಪ್ರತಿಯೊಬ್ಬಂಗೂ ತಿಳ್ಸಿಕೆ
ಬರ್‍ತಾ ಉಟ್ಟು ಹಿಂಗಾರ ಪತ್ರಿಕೆ
ಭಾಷೆ ಸಂಸ್ಕೃತಿನ ಉಳ್ಸಿಬೆಳ್ಸಿಕೆ
ಮಾದರಿಯಾಗಲಿ ನಮ್ಮ ಯುವ ಜನಾಂಗಕ್ಕೆ

✍ಬೈಲೇರಾ ಭಾನು ಅಶೋಕ್

**ಬಿಳಿಗೇರಿ ಗ್ರಾಮ,**
**ಮಡಿಕೇರಿ ತಾಲೂಕು,**
**ಕೊಡಗು ಜಿಲ್ಲೆ.**

# ಹೆಣ್ಣ್

ಕೂಸಾಗಿ ಲಾಯಿಕ್ಕಾಗಿ ಬೆಳೆದರೂ, .
ಪ್ರೀತಿಯ ಮಗಳಾಗಿಯೇ ಬಂದರೂ
ಸಕ್ಕರೆಯಂಗೆ ಸಿಹಿಯಾದ ಮಾತಾಡಿರೂ
ಹೆಣ್ಣಾಗು ನೀ ಹೆಣ್ಣೆ ನೀ ಸೌಭಾಗ್ಯಳಾಗು!!

ಅಣ್ಣನ ಪ್ರೀತಿಯ ತಂಗೆಯಾಗೊಳ ನಂಗೊತ್ತಿಲ್ಲೆ.
ತಮ್ಮನ ಪ್ರೀತಿಯ ಅಕ್ಕನಾಗೊಳನೋ ನಂಗೊತ್ತಿಲ್ಲೆ.
ನೆರೆಕರೆಯವುಕ್ಕೆಲ್ಲಾ ನೀನ್ ಒಳ್ಳೆಯ ಗುಣ ಇರುವವಳೋ.
ಹೆಣ್ಣಾಗು ನೀ ಪ್ರೀತಿಯ ಸಿರಿಯಾಗು

ಮನೆಯವರೆನೆಲ್ಲಾ ಸುಧಾರಿಸಿಕಂಡ್
ಹೋಗುವ ಸೊಸೆಯಾಗು ನೀ,
ಮನಸ್ಸು ತುಂಬಿ ನಡೆವ ಅತ್ತೆ ಆಗ್
ಮರ್ಡುದು ಬುಟ್ಟ್ ಪ್ರೀತಿ ತೋರ್ಸುವ
ಹೆಣ್ಣಾಗು ನೀ ಮನೆಯ ಕಣ್ಣಾಗ್, ಸಂಪತ್ತ್‌ನ ಸಿರಿಯಾಗ್.

ಗಂಡನ ಪ್ರೀತಿಯ ಹೆಣ್ಣಾಗ್,
ಗಂಡನ ಪ್ರೀತಿಗೆ ಜೇನಾಗ್
ಮುತ್ತಾಗಿ ಮಿಂಚಿ, ಸ್ವತ್ತಾಗಿ ತುಂಬು
ಹೆಣ್ಣಾಗು ನೀ ಮನೆಯ ಹೂವಾಗು॥

✍ಕೊಂಪುಳಿ ಪೊನ್ನಮ್ಮ ಉತ್ತಪ್ಪ

ಐಕೊಳ ಗ್ರಾಮ,
ಮರಗೋಡು ಅಂಚೆ,
ಮಡಿಕೇರಿ ತಾಲೂಕು.

# ನೊಂದ ಹೆಣ್ಣ್‌ಗೆ ಎಲ್ಲ್ಯ್ಯಟ್ ನ್ಯಾಯ?

ಹೇಳ್‌ನೆ ಗೆಳತಿ
ನೊಂದ ಹೆಣ್ಣ್‌ಗೆ ಎಲ್ಲಿ ಉಟ್ಟು ನ್ಯಾಯ?
ಗರ್ಭಲಿ ಇದ್ದ ಕೂಸು
ಗಂಡಲ್ಲತ್ತೇಳಿ
ಭ್ರೂಣ ಹತ್ಯೆ ಮಾಡಿಸಿಕಾಕನ
ನೊಂದ ಹೆಣ್ಣ್‌ಗೆ ಎಲ್ಲಿ ಉಟ್ಟು ನ್ಯಾಯ?

ಪ್ರೀತಿ ಹೆಸ್ರ್‌ಲಿ ಬದುಕು ಅರಸಿ ಹೊರಟಾಕನ
ಜಾತಿ ಬೇಧಂದ ವಿಷದ ಬೀಜ ಬಿತ್ತಿ ಮರ್ಯಾದೆ ಹತ್ಯ ನಡೆಸುಕಾಕನ
ನೊಂದ ಹೆಣ್ಣ್‌ಗೆ ಎಲ್ಲಿ ಉಟ್ಟು ನ್ಯಾಯ?

ಹೆಣ್ಣ್ ಮನೆಯೊಳಗಿದ್ದ್ ಗಂಡ
ಬೇರೆ ಹೆಣ್ಣ್‌ಜತೆ ಚೆಲ್ಲಾಟಂದ ಬದುಕ್ ನಡೆಸುಕಾಕನ
ನೊಂದ ಹೆಣ್ಣ್‌ಗೆ ಎಲ್ಲಿ ಉಟ್ಟು ನ್ಯಾಯ?

ಕೈ ಹಿಡ್ದ ಹೆಣ್ಣ್‌ಗೆ ಆಸರೆಯಾಕೆ ಬದಲ್
ಹೊಡ್ದ್-ಬಡ್ದ್ ಹಿಂಸಿಸಿ ಕೊಲ್ಲುಕಾಕನ
ನೊಂದ ಹೆಣ್ಣ್‌ಗೆ ಎಲ್ಲಿ ಉಟ್ಟು ನ್ಯಾಯ?

ಹೆಸರಿಗಿದ್ದ್ ಮಹಿಳಾ ಆಯೋಗ
ಅದರಲ್ಲಿ ಎಷ್ಟು ಉಟ್ಟು ಹೆಣ್ಣಿಗೆ ನ್ಯಾಯ ಸಿಗುವ ಯೋಗ?
ನೊಂದ ಹೆಣ್ಣಿಗೆ ಎಲ್ಲಿ ಉಟ್ಟು ನ್ಯಾಯ?

ಅಲ್ಲಿಂದ ಕಳಿಸಿರೂ ಮಹಿಳಾ ಸಾಂತ್ವನ ಕೇಂದ್ರಕೆ
ಮೂರು ಅರ್ಜಿಗೆ ಗಂಡ ಬಾರದಿರುಕಾಕನ ಕೇಸ್ ಮುಗ್ತ್‌ತ್ತೇಳಿ
ದಾಖಲೆ ಸೃಷ್ಟಿಸಿರೆ ನೊಂದ ಹೆಣ್ಣ್‌ಗೆ ಎಲ್ಲಿ ಉಟ್ಟು ನ್ಯಾಯ?

ನ್ಯಾಯ ಕೊಡಿಸಿಕೆತೇಳಿ ಆರಕ್ಷಕ ಠಾಣೆಗೆ ಹೋದರೆ
ರಕ್ಷಿಸಬೇಕಾದವನೇ ಭಕ್ಷಕರಾಗಿ ಕಾಡಿರೆ?
ನೊಂದ ಹೆಣ್ಣ್‌ಗೆ ಎಲ್ಲಿ ಉಟ್ಟು ನ್ಯಾಯ?

✍ಎಂ.ವಿ. ಮೋಹನ್ ಕುಮಾರ್

# ಪ್ರೀತಿ

ಕಡ್ದಾತ್ ಮೊಸ್‌ರು ತೆಗ್ದಾತ್ ಬೆಣ್ಣೆ
ಇಸಿ ಆತ್ ಎತ್ತರದ ನೇಲುವ ನೆಲುಲಿ
ತನ್ನಂತ ಪುಂಡ್ ಹಿಂಡ್ ದೋಸ್ತಿಗಳೊಟ್ಟಿಗೆ
ಒಳಗೆ ಹುಕ್ಕ್ ಕದ್ದ್ ತಿಂಬಕಾಗದ್‌ತೇಳಿ
    ಯಾಕೆ ಬಾತ್ಲೆ ಇನ್ನೂ? ಯಾಕೆ ಇಷ್ಟ್ ತಡುವಾತ್
    ಮುಚ್ಚಿ ಇಸಿರೂ ಬೆಣ್ಣೆ ಹುಡ್‌ಕಿವೆ ಕಣ್ಣ್,
    ಕೈಲಿ ಕೋಲುನ ಹಿಡ್ದ್ ಬಾಗ್ಲ ಪುಡೆಲಿ ನಿತ್ತ್
    ಆಸೆಂದ ಕಾದರೂ ಈ ಕೂಸು ಬಾತೇಲೆ!
ಸೊರ ಬರದ ಸದ್ದ್‌ಲಿ ಕೇಳದಿದ್ದರೆತೇಳಿ
ಇಡೀ ಮೈಯೇ ಕೆಬಿ ಆಗಿ ಕಾದದೇ ಬಾತ್
ಎಲ್ಲಿಯಾರ್ ಕಣ್ಣ್ ತಪ್ಪುಸಿ ಹೈದ ಒಳಗೆ ಹುಗದಾಂಗೆ
ಇಡೀ ಮೋರೇ ಕಣ್ಣ್ ಆಗಿ ಹುಡ್ಕುದೇ ಆತ್.
    ಕೃಷ್ಣ ಬಾತ್‌ಲೆ, ಗೋಕುಲಲಿ ಬೆಣ್ಣೆಗೇನ್ ಬರ!?
    ಯಾವ ಗೋಪಿನ ಮನೆಲಿ ಬೆಣ್ಣೆ ತಿಂದ್‌ಕಂಡ್ ಉಟ್ಟೋ?
    ಯಾವ ಗೋಪಮ್ಮನ ಬಿಗಿ ಅಪ್ಪುಗೆನ ಬಿಸಿಲಿ
    ಬೆಣ್ಣೆನ ಹಾಂಗೇ ಏಲಿ ಸಮ್ಮಾನ ಮಾಡಿಕಂಡುಟ್ಟೋ?
ದೊಡ್ಡ ಉಸುರುನ ಬುಟ್ಟು ಕೈಲಿದ್ದ ಕೋಲುನ ಅತ್ತ ಇಟ್ಟ್
ಕಣ್ಣ್ ನೀರ್‌ನ ಸೆಂರ್ಗ್‌ಂದ್ ಒರ್ಸಿಕಂಬಕನ
ಯಾವ ಮಾಯ್ಕಲಿ ಹೈದ ಒಳೆಗೆ ಹುಕ್ಕತೋ ಗೊತ್ಲೆ
ಬೆಣ್ಣೆ ಅಳೆಗೆನ ನೇಚಿಕಂಡ್ ಮಾಯ!
    ಕುಶಿಂದ ಯಶೋದೆ ಮತ್ತೆ ಕೋಲುನ ತಕಂಡ್
    ನಿಲ್ಲ್ ನಿಲ್ಲ್‌ತ ಓಡಿ ಬಾಕನ ಆ ತುಂಟ ಮೋರ
    ಗಿಜಿ ಗಿಜಿ ಕಾಲ್‌ಗೆಜ್ಜೆ ನಾದ ಹೊರ್ಡಿಸಿಕಂಡ್
    ಕೊಣ್ಕಂಡ್ ಕೊಣ್ಕಂಡ್ ಹೋತ್ ದೂರ !
ಕೂಸುನ ಆಟನ ನೋಡಿ ತಾನೂ ಅವನಂಗೇ ಆಡಿ
ಏದುಸುರು ಬುಡ್‌ಕನ ಎಂತ ತೃಪ್ತಿ!
ಗೋಳು ಹೊಯ್ಕಂಡರೂ ತಿರ್‍ಗಿ ಓಡಿ ಬಂದ್
ಅವ್ವನ ತಬ್ಬಿಕಂಡ್ ಒಂದಾವ ಪ್ರೀತಿ!!

✍ಲೀಲಾ ದಾಮೋದರ.

'ಧಾತ್ರಿ' ವಲಯ ಅರಣ್ಯಾ ಕಚೇರಿ ಹತ್ತಿರ,
ಗಾಂಧಿನಗರ, ಸುಳ್ಯ–574239
ಮೊ : 9449451051

# ಚುಟುಕುಗ

## ಕಲ್‌ತಾಕನ

ಆಸೆ ಆತ್ ನಂಗೆ ಅಂದ್
ಭಾಷೆ ಕಲಿಯುಕುತ
ಅದಕ್ಕಾಗಿ ನಾನ್ ಬರ್ದೆ
ಸಣ್ಣ ಸಣ್ಣ ಪದ್ಯ.

## ತೀರ್‌ದ ಆಸೆ

ಭಾಷೆ ಕಲ್ತ್ ಆಸೆ ತೀರ್ಸಿ
ಕೊಣೆವ ಆಸೆ ನನ್ನದ್
ಭಾಷೆ ಒಳಗೆ ಭಾವ ತುಂಬಿ
ಬೆರೆವ ಮನಸ್ಸ್ ನನ್ನದು.

## ಗಾಳಿ

ಮಳೆನ ರಭಸಕೆ
ಕೊಡೆ ಮುರ್ದ್ ಹೋತು
ಬಿರುಸಿನ ಗಾಳಿಗೆ
ಬೀಳುವಂಗೆ ಆತ್
ಕಾಲ್ ತಳ್ಳಿರಿಸಿ ಹೋತ್.

✍ಹರ್ಷ ಎಸ್.

9ನೇ ತರಗತಿ
ಸಂತ ಮೈಕಲರ ಶಾಲೆ,
ಮೇಕೇರಿ ಗ್ರಾಮ
ಕಗ್ಗೋಡ್ಲು ಅಂಚೆ,
ಮಡಿಕೇರಿ ತಾಲೂಕು
ಮೊ : 9481370263

# ದೂರ ಆದ ಕಾಗದ ಪ್ರೀತಿ

## ಮಣಿಗೊಂದು ಕಾಗದ

ನನ್ನ ಪ್ರೀತಿಯ ಮಣಿಗೆ ನಿನ್ನ ಮಾಸ್ಟ್ ಮೇಣಸಿನ ಕಾಳಪ್ಪ ಬರ್ದ್ ಮಾಡುವ ಆಶೀರ್ವಾದಗ. ಆದಾಗಿ ನಾನ್ ಇಲ್ಲಿ ಕ್ಷೇಮವಾಗೊಳೆ. ನೀನು ಕ್ಷೇಮಾವಾಗೊಳಂತ ನಂಬಿಯೊಳೆ. ಇನ್‌ಲ್ಯಾಂಡ್ ಲೆಟರ್‌ಲಿ ಕಾಗದ ಬರಿಯದೆ ತುಂಬಾ ವರ್ಷ ಆತ್. ಈಗ ಈ ಹಾಳಾದ ಮೊಬೈಲ್ ಬಂದ್ ಕಾಗದ ಬರಿಯದು ಸತ ಮರ್ತೋಗ್‌ತ್. ನಂಗೆ ಮೊಬೈಲ್ ಲಿ ತುಂಬಾ ಹೊತ್ತ್ ಮಾತಾಡ್ಕೆ ಆದುಲೆ. ಜಾಸ್ತಿ ಹೊತ್ತ್ ಮಾತಾಡ್ರೇ ಕಿವಿ ಎಲ್ಲ ಬಿಸಿ ಬಂದದೆ. ನಿಂಜೊತೆ ತುಂಬಾ ಮಾತಾಡೋಕು. ಅದ್ದೆ ನಿಂಗೆ ಈಗ ಕಾಗದ ಬರೀತೊಳೆ. ನೀನ್ ಈಗ ದೊಡ್ಡ ಕ್ಲಾಸ್‌ಗೆ ಹೋಗೊಳ, ಅದ್ಕೆ ನಾ ತಿಳ್‌ದ ಮಟ್ಟಿಗೆ ಸಲ್ಪ ವಿಷಯನ ನಿಂಗೆ ಬರ್ದ್ ತಿಳಿಸಿನೆ.

ನೀನ್ ಅಂದ್ ನಮ್ಮ ಮನೆಗೆ ಬಾಕನ, ನೀ ಓದಿ ಮುಂದೆ ಏನ್ ಆದಿಯಾಂತ ಕೇಳಿಕನ ನೀನ್ ಹೇಳ್ದ – ಲಾಯ್ಕಾಗಿ ಓದಿ ರಾಜಕೀಯಕ್ಕೆ ಸೇರಿ ಮಂತ್ರಿ ಆನೇತ. ಎಲ್ಲ ಮಕ್ಕಳ್ನ ಕೇಳಿಕನ ನಾನ್ ಡಾಕ್ಟರ್ ಆನೆ, ಇಂಜಿನಿಯರ್ ಆನೆಂತ ಹೇಳ್ವೆ, ನೀನ್ ಮಾತ್ರ ಮಂತ್ರಿ ಆನೇತ ಹೇಳ್ಕನ ನಂಗೆ ತುಂಬಾ ಖುಶಿ ಆತ್. ನೀನ್ ತುಂಬಾ ಒಳ್ಳ ನಿರ್ಧಾರ ತಕೊಂಡೊಳ. ನೀನ್ ಗ್ಯಾನ ಮಾಡ್ದುನ್ನ ಪೂರೈಸ್. ಯಾರ ಮಾತ್ ಕೇಳ್ಬೆಡ. ಅವ್ ಅದೂ ಇದೂ ಹೇಳಿ ನಿನ್ನ ತಲೆ ತಿರ್ಗಿಸಿ ಬುಡುವೊ. ನೀನ್ ಯಾಗೋಳ್ ಬೆಳ್ಗೆ ಹಾಸಿಗೆಂದ ಏಳಿಕೆನ ದೇವ್ರ್‌ಗೆ ಕೈ ಮುಗ್ದಿಯಲ್ಲ ಆಗ ಇದ್ನೇ ಕೇಳಿಕಾ. ಓದುವ ಕಡೆ ಯಾಗೋಳು ಗ್ಯಾನ ಮಾಡ್ಕ. ಪರೀಕ್ಷೆಲಿ ಲಾಯ್ಕಾಗಿ ಬರ್ದ್ ಡಿಸ್ಟಿಂಕ್ಶನ್‌ಲಿ ಪಾಸ್ ಆಗ್. ಬೆಳಿಗ್ಗೆ ನಾಲ್ಕು ಗಂಟೆಗೆ ಎದ್ದ್ ಅಂದ್‌ದು ಪಾಠನ ಅಂದೇ ಓದಿಕ. ನಿಮ್ಮ ಸ್ಕೂಲ್‌ಲಿ ಹೇಳಿಕೊಡುವ ಪಿ.ಟಿ. ನ ಯಾಗೋಳ್ ಬೆಳಿಗ್ಗೆ ಮನೇಲಿ ಅಭ್ಯಾಸ ಮಾಡ್. ಅದ್ರ ಜೊತೆ ಸ್ವಲ್ಪ ದೇವ್ರುದು ಧ್ಯಾನ ಮಾಡಿ ಪ್ರಾರ್ಥನೆ ಮಾಡ್ತ್ ಇರ್. ನಮ್ಮ ಮನೆ ದೇವ್ರು ಶ್ರೀ ವೆಂಕಟರಮಣ (ಭಗವಾನ್ ಮಹಾ ವಿಷ್ಣು) ಪುರಾಣ ಕಾಲಲಿ ಬಲಿ ಚಕ್ರವರ್ತಿದ್ ಅಜ್ಜಪ್ಪ ಪ್ರಹ್ಲಾದನ ಭಕ್ತಿಗೆ ಮೆಚ್ಚಿ ಅವಂಗೆ ವರ ಕೊಟ್ಟಂಗೆ ನಿನ್ನ ಈ ಸಣ್ಣ ಆಸೆನ ಪೂರೈಸದಿದ್ದದೆಯ ಕೂಸು? ಮತ್ತೆ ಹೊಟ್ಟೆಗೆ ಸರಿಯಾಗಿ ಊಟ ಮಾಡಿಕಣ್ಣಕ್ಕು. ಊಟನ ನಿದಾನಲಿ ಮಾಡಕು. ಟಿ.ವಿ. ನೋಡಿಕಂಡ್, ಮೊಬೈಲ್ಲಿ ಆಟ ಆಡಿಕಂಡ್ ಉಂಬಕ್ಕಾಗದ್. ಊಟ ಆದಮೇಲೆ ನೀರ್ ಕುಡಿಯಕ್ಕು. ನಿಂಗೆ ಗೊತ್ತಾ? ನಾವ್ ಅನ್ನ ಚಪಾತಿ ಎಲ್ಲ ತಿಂದವೆಲ್ಲ

ಅದ್ ನಮ್ಮ ಸರೀರಕೆ ಎಷ್ಟು ಬಲ ಕೊಟ್ಟದೆಂತ? ಅದ್ 20% ಬಲ ಕೊಟ್ಟದೆ. ನೀರ್ 10% ಬಲ ಕೊಟ್ಟದೆ. ಇದ್ ಮೈ ಬೆಳ್ಸಿದೆ. ಇನ್ 70% ಬಲ – ಭೂಮಿ, ಗಾಳಿ ಮತ್ತೆ ಆಕಾಸ್‌ಲಿರುವ ಗ್ರಹ, ನಕ್ಷತ್ರಗಳ್‌ಂದ ಕಿರಣದ ಜೊತೆ ಬಂದ್ ನಮ್ ಸರೀರಕೆ ಸೇರ್ದೆ. ಇದ್ಕೆ **ಕಾಸ್‌ಮಿಕ್ ಎನರ್ಜೀ ತ ಹೇಳುವೆ. ಇದ್ ಬುದ್ದಿ ಬೆಳ್ಸಿದೆ. ಈ ಕಿರಣಗ ಬೆಳಿಗ್ಗೆ ನಾಕ್ ಗಂಟೆಂದ ಏಳ್ ಗಂಟೆವರೆಗೆ ಬರ್ತಾ ಇದ್ದದೆ. ಅದ್ಕೆ ಹಿರಿಯವ್ ಹೇಳ್ದು ಬೆಳಿಗೆ ನಾಕ್ ಗಂಟೆಗೆ ಎದ್ದ್ ಓದೊಕೂಂತ.** ಬೆಳಿಗೆ ಸಮಯಲಿ ನಮ್ಮ ಸರೀರಲಿ ಮಿದುಳ್ಗೆ ಬಲ ಕೊಡುವ ಎಂಡೋಕ್ರೈನ್ ಗ್ಲ್ಯಾಂಡ್ಸ್ಗ ಚುರುಕಾಗಿ ಕೆಲಸ ಮಾಡುವೆ. ಇದರ್ಲಿ ಪಿಟುಟ್ಯೋರಿ ಗ್ಲ್ಯಾಂಡ್, ಮತ್ತೆ ಪಿನಿಯಲ್ ಗ್ಲ್ಯಾಂಡ್ ನಮ್ಮ ತಲೆಯೊಳಗೆ ಒಳೊ. ಇವ್ಕೆ ಯೋಗಲಿ ಆಜ್ಞಾ ಚಕ್ರ ಮತ್ತೆ ಸಹಸ್ರಾ ಚಕ್ರ ತ ಹೇಳುವೆ. ಬೆಳಿಗೆ ಇವು ಎರಡೂ ಎಂಡೋಕ್ರೈನ್ ಗ್ಲ್ಯಾಂಡ್ಸ್ಗ ಕಾಸ್‌ಮಿಕ್ ಎನರ್ಜೀನ ಹೀರಿಕಂಡವೆ. ಇದರ್‌ಂದ ಬುದ್ದಿ ಚುರುಕಾಗಿ ನೀ ಓದಿದ್ ಎಲ್ಲ ಅರ್ಥ ಆಗಿ ಮೆದುಳ್ ಲಾಯ್ಕಾಗಿ ಗೇನ ಮಡ್ಕಂಡದೆ. ಹಂಗೇ ಪರೀಕ್ಷೆಲಿ ಬರಿಯಕನ ಲಾಯಕ್ಕಾಗಿ ಗೇನ ಬಂದದೆ.

ನೀನ್ ಬರೀ ಪುಸ್ತಕದ ಹುಳ ಆಗ್ಬೇಡ. ಮನೇಲಿ ಪೊಪ್ಪ ಮಮ್ಮಿಗೆ ಸಣ್ಣ ಸಣ್ಣ ಮನೆ ಕೆಲ್ಸಕೆ ಸಾಯ ಮಾಡ್. ಕೆಲ್ಸ ಮಾಡ್ರೆ ನಿಂಗೆ ವಿಶೇಷ ಜ್ಞಾನ (ಕಾಮನ್ ಸೆನ್ಸ್) ಬಂದದೆ. ಪೊಪ್ಪ, ಮಮ್ಮಿಗೆ ಬೈಬೇಡ. ಯಾಗೋಳು ಅವರ ಆಶೀರ್ವಾದ ತಕ. ಮುಕನ ಊದಿಸ್ಕಂಡ್ ಇರ್ಬೇಡ. ನಾವು ಇಲ್ಲಿಗೆ ಬಾಕನ ಏನೂ ತಕಂಡ್ ಬಾತ್ಲೆ. ಹೋಕನ ಏನೂ ತಕಂಡ್ ಹೋದುಲ್ಲೆ. ಬಿ ಹ್ಯಾಪೀ, ಬಟ್ ಬಿ ಎ ಗುಡ್ ಪ್ಲೇಯರ್. ಅರೆಬಾಷೆಲಿ ಇರುವ ಒಂದು ಅದ್ಭುತ ಕತೆ ಪುಸ್ತಕ "ಚಾಂಪ" ತಕೊಂಡ್ ಓದ್. ಆ "ಚಾಂಪ" ಪುಸ್ತಕಲಿರುವ ಎಲ್ಲಾ ಕತೆಗ ಮನ್‌ಸ್ಗೆ ತುಂಬಾ ಖುಶಿ ಕೊಟ್ಟದೆ. ದಿನಾ ನ್ಯೂಸ್ ಪೇಪರ್ ಓದ್. ಸ್ಕೂಲಿ ಆಟ, ಓಟ, ಚರ್ಚಾಕೂಟ, ಎನ್.ಸಿ.ಸಿ., ಎನ್.ಎಸ್.ಎಸ್. ಎಲ್ಲಕ್ಕೂ ಸೇರಿಕ. ಆಟಲಿ ಗೆಲ್ಲುದು, ಸೋಲ್ದ್ ಮುಖ್ಯ ಅಲ್ಲ. ಆಟ ಆಡಿರೆ ಸಾಕ್. ರಾತ್ರೀಲಿ ತುಂಬಾ ಹೊತ್ತ್ ಓದ್ಬೇಡ.. ಬೇಗ ಮಲ್ಗಿ ಬೇಗ ಎದ್ದೇಳ್. ಸ್ಕೂಲ್‌ಗೆ ಹೋಕನ ನೀನ್ ಸೈಕಲ್ ತಕೊಂಡೋದಿಯಾತ ನಿನ್ನ ಪೊಪ್ಪ ಮೊನ್ನೆ ದಾರಿಲಿ ಕಾಂಬಕೆ ಸಿಕ್ಕಿ ಹೇಳ್ದೊ. ತುಂಬಾ ಹುಷಾರಾಗಿ ನೋಡಿಕಂಡು ರೋಡು ಬರೀಲಿ ಹೋಕು. ಟ್ರ್ಯಾಫಿಕ್‌ಲಿ ಪೊಲೀಸ್‌ದ್ ಕಣ್ಣ್ ತಪ್ಪಿಸಿ ಹಂಗೆ ನುಗ್ಗಿಸಿಕಂಡ್ ಹೋಗ್ಬೇಡ. ಹಸುರು ಲೈಟು ಬಂದ ಮೇಲೆ ಹೋಕು. ಗೊತ್ತಾತ? ರಜಾ ಇರ್ಕನ್ನ ಏನ್ ಮಾಡಿಯ? ಪಿಕ್ನಿಕ್, ಟೂರ್, ಫ್ರೆಂಡ್ ಮನೆ ನೆಂಟ್ರ ಮನೆಗೆಲ್ಲಾ ಹೋಕು. ನೆಂಟ್ರು ಮನೆಗೆ ಹೋಕನ ಅಲ್ಲಿ ನೀನ್ ಅಪರೂಪಕೆ ಬಂದೊಳ ಇದೊಂದು ಸಲ ಒಂದ್ ಪೆಗ್ ಹಾಕ್, ಅರ್ದ ಗ್ಲಾಸ್ ಬೀರ್ ಕುಡಿ, ಮತ್ತೆ ಮನೆಲಿ ಹೋಗಿ

ಕುಡಿ ಬೇಡಂತ ಪ್ರೀತಿಂದ ಹೇಳುವೊ. ಸ್ಕೂಲ್‌ಗೆ ಹೋಗುವ ಮಕ್ಕ ಕಳ್ಳು ಕುಡಿಯಕ್ಕಾಗದ್. ಇದೆಲ್ಲಾ ನಿಂಗೆ ಗೊತ್ತುಟ್ಟುತಾನೇ?

ಮಂತ್ರಿಯಾಗಿ ನೀನ್ ಒಳ್ಳೆ ಕೆಲಸಗಳ್ನ ಮಾಡೋಕ್. ಅದ್ಕೆ ಈಗಲೇ ತಯಾರಿ ತಕ. ಜನ ಹೇಳ್ವೆ, ಈಗ ಒಳ್ವೆಯವ್ಕೆ ಕಾಲ ಇಲ್ಲೆಂತ. ಪ್ರಪಂಚಲಿ ಒಳ್ಳದ್ ಕೆಟ್ಟದ್‌ಂತ ಯಾವುದು ಇಲ್ಲೆ. ನೀನ್ ಬುದ್ಧಿವಂತ ಆಗಿರೋಕು ಅಷ್ಟೇ. ಏನಾರ್ ಅನ್ಯಾಯ ಆದರೆ ಅದ್ನ ವಿರೋದಿಸಕ್. ಸುಮ್ಮನೆ ರಸ್ತೆಲಿ ಜನ ಸೇರಿಸಿ ಸ್ಟ್ರೈಕ್ ಮಾಡಿ ಹೋಗವ್ಕೆ ಬರವ್ಕೆ ತೊಂದರೆ ಕೊಡಕ್ಕಾಗದ್. ಕಾನೂನು ರೀತಿಲಿ ಹೋರಾಡಕ್. ನೀನ್ ಪುರುಸೊತ್ ಮಾಡಿಕಂಡ್ ಮಹಾತ್ಮ ಗಾಂಧೀಜಿದ್ "ಆತ್ಮ ಕಥೆ" ಪುಸ್ತಕ ತಕಂಡ್ ಓದ್. ಗಾಂಧೀಜಿ ದಕ್ಷಿಣ ಆಫ್ರಿಕಲಿ ಪಟ್ಟ ಕಷ್ಟ, ಅವಮಾನ ಮತ್ತೆ ಅದರ್ನ ಎದುರಿಸ್ದ ರೀತಿ ನಿಂಗೆ ರಾಜಕೀಯ ನಾಯಕ ಆಕೆ ತುಂಬಾ ಸಾಯ ಆದೆ.

ನೀನ್ ಯಾಕೆ ಮಂತ್ರಿ ಆದಿಯಾಂತಾ ನಂಗೆ ಈಗ ಗೊತ್ತಾತ್. ಜನಕ್ಕೆ ಒಳ್ಳೆಕೆಲ್ಸ ಮಾಡಿ ಕೊಡೊಕುತ ನಿಂಗೆ ಮನಸ್‌ಲಿ ದೊಡ್ಡ ಆಸೆ ಉಟ್ಟು. ಮಂತ್ರಿ ಆದ್ರೆ ನಿನ್ನ ಕೈಕೆಳಗೆ ಎಲ್ಲ ಅಧಿಕಾರಿಗ ಬಂದವೆ. ನೀ ಹೇಳ್ದಂಗೆ ಕೆಲ್ಸ ಮಾಡುವೆ. ಕಾನೂನು ಮಾಡುವ ಅಧಿಕಾರ ನಿಂಗೆ ಇದ್ದದೆ.. ನಿಂಗೆ ಐ.ಎ.ಎಸ್. ಮಾಡ್‌ತ ನಾ ಹೇಳ್ಕನ ನೀ ಹೇಳ್ದ, ಅವ್ ಸತ ಮಂತ್ರಿಗ ಹೇಳ್ದಂಗೆ ಕೆಲಸ ಮಾಡೊಕು. ಅದ್ಕೇ ಅದ್ ನಂಗೆ ಇಷ್ಟ ಇಲ್ಲೇಂತ. ಆಗ ನಂಗೆ ಮಹರ್ಷಿ ಅರಬಿಂದೋ ಘೋಷ್ ನಾ ಗೇನ ಆತ್. ಅವ್ ಬ್ರಿಟಿಷ್ ಆಡಳಿತಲಿ ಐ.ಸಿ.ಎಸ್. ಪಾಸ್ ಮಾಡಿದ್ದೊ. ಬ್ರಿಟಿಷ್‌ನವರ ಕೈಕೆಳಗೆ ಕೆಲಸ ಮಾಡಿಕೆ ಇಷ್ಟ ಇಲ್ಲದೆ ಬೇಕೂಂತ ಕುದುರೆ ಸವಾರಿಲಿ ಫೇಲ್ ಆದೊ.

ಅಂದ್ ನೀ ಹೇಳ್ದ ನೀನ್ ಮಂತ್ರಿಯಾದರೆ ಹಳ್ಳಿಗೆ ಒಳ್ಳ ಕೆಲಸ ಮಾಡಿನೆಂತ. ನೀನ್ ಹಂಗೆ ಹಳ್ಳಿ, ಪಟ್ನಾಂತ ಬೇದ ಮಾಡ್ಬೇಡ. ಹಳ್ಳಿಲಿ ಜನ ಹಳ್ಳಿಲೇ ಇದ್ದ್ ಬೇಸಾಯ ಮಾಡಿಕೆ ಅನುಕೂಲ ಮಾಡಿಕೊಡು. ನೀನ್ ಸ್ವಲ್ಪ ಸಮಯ ಮಾಡಿಕಂಡ್ ಯೂ ಟ್ಯೂಬ್‌ಲಿ ಬಂಗಾರದ ಮನುಷ್ಯ ಪಿಕ್ಚರ್ ನೋಡಿ ಟಿ.ಕೆ ರಾಮ್‌ರಾವ್ ಬರ್ದ ಕತೇಲಿ ಒಬ್ಬ ರಾಜೀವ (ವರ ನಟ ಡಾ. ರಾಜ್‌ಕುಮಾರ್) ತೇಳುವ ಪದವೀಧರ ಪಟ್ಟಣಲಿ ಓದಿ, ಹಳ್ಳಿಗೆ ಬಂದ್, ಹಳ್ಳಿಲಿ ವಾಸ ಇದ್ದ್ 25 ಏಕ್ರೆ ಕಲ್ಲು ಬಂಡೆ ಇದ್ದ ಭೂಮಿನ ಗದ್ದೆ ಮಾಡಿ ಬೆಳೆ ಬೆಳ್ದ್ ದೊಡ್ಡ ಶ್ರೀಮಂತ ಆದೆ. ಕೈ ಕೆಸರಾದರೆ ಬಾಯ್ ಮೊಸರ್ ಆದೆತೇಳುವ ಗಾದೆನಾ ನಿಜ ಮಾಡ್ದೆ. ರಜುತಪ್ಪ (ಬಾಲಕೃಷ್ಣ) ತೇಳುವ ಒಬ್ಬ ಶ್ರೀಮಂತ ಅವಂಗೆ ತುಂಬಾ ಸಾಯ ಮಾಡ್ದೆ. ನೀನ್ ಮಂತ್ರಿ ಆದಿಯಲ್ಲ ಆಗ ನೀನು ರಜುತಪ್ಪ ತರ ತುಂಬಾ ರಾಜೀವಗಳ್ನಾ ಬೆಳೆಸೋಕು. ನೀನ್ ರಾಜಕೀಯಕೆ ಹೋದ್ ನೋಡಿ ಬೇರೆಯವ್

ಅವ್ಕೆ ರಾಜಕೀಯ ಇಷ್ಟ ಇಲ್ಲದಿದ್ದರೂ ಸುಮ್ಮನೆ ನಿಂಜೊತೆ ಪೈಪೋಟಿಗೆ ಬರುವ್ರೋ. ಅವ್ಕೆ ಹೇಳ್ ರಜುತಪ್ಪ ಒಬ್ಬನೇ ಒಬ್ಬ ಸಾಕ್, ರಾಜೀವಪ್ಪಗ ತುಂಬಾ ಬೇಕೂಂತ. ಹಂಗೂ ಅವ್ಕೆ ಏನಾರೂ ದೊಡ್ಡ ರೀತಿಲಿ ದೇಶ ಸೇವೆ ಮಾಡೋಕುಂತ ಮನಸ್ ಇದ್ದರೆ ಮದರ್ ಥೆರೇಸಾ ತರ ಸಮಾಜ ಸೇವೆ ಮಾಡಲಿ. ಅಬ್ದುಲ್ ಕಲಾಂ ತರ ವಿಜ್ಞಾನಿ ಆಗಲಿ.

ಇಲ್ಲಿಗೆ ಈ ಕಾಗದ ಬರಿಯದುನ ನಿಲ್ಲಿಸಿನೆ.. ಬಾಕಿ ವಿಷಯ ನೀ ಊರಿಗೆ ಬಾಕನ ನಮ್ಮ ಮನೆಗೆ ಬಾ ಮರಿಬೇಡ. ನಿನ್ನ ಪೊಪ್ಪ, ಮಮ್ಮಿನೆಲ್ಲ ಕೇಳ್ದೆಂತ ಹೇಳ್.

ಇಂತೀ ಆಶೀರ್ವಾದಗಳೊಂದಿಗೆ,
ನಿನ್ನ ಪ್ರೀತಿಯ ಮಾಸ್ಟ್ ಮೆಣಸಿನ ಕಾಳಪ್ಪ..

✍ಹೊಳೆಕೆರೆ ಚೆಂಗಪ್ಪ

#30, 3 ನೇ ಹೆಚ್. ಕ್ರಾಸ್
ರುಕ್ಮಿಣಿನಗರ, ನಾಗಸಂದ್ರ ಅಂಚೆ,
ಬೆಂಗಳೂರು – 560073

## ಹಿಂಗಾರ ಅನಾವರಣ

ಹಿಂಗಾರ ತ್ರೈಮಾಸಿಕದ ಎಂಟನೇ ಆವೃತಿನ 14–06–18 ರಂದ್ ಅಕಾಡೆಮಿನ ಕಚೇರಿಲಿ ಕನ್ನಡ ಮತ್ತು ಸಂಸ್ಕೃತಿ ಇಲಾಕೆನ ಸಹಾಯಕ ನಿರ್ದೇಶಕರಾದ ಶ್ರೀಮತಿ ದರ್ಶನ್‌ನವು ಅನಾವರಣ ಮಾಡ್ದೊ. ಅಂದ್‌ನ ಸಭೆಲಿ ಅಕಾಡೆಮಿನ ಅಧ್ಯಕ್ಷರ್, ರಿಜಿಸ್ಟ್ರಾರ್ ಮತ್ತೆ ಎಲ್ಲಾ ಸದಸ್ಯರ್ ಅಲ್ಲದೆ ಕಚೇರಿನ ಸಿಬ್ಬಂದಿಯವು ಹಾಜರಿದ್ದೊ. ಎಂಟನೇ ಆವೃತ್ತಿ ಮುದ್ರಣ ಆಗಿ ಅನಾವರಣ ಆಗುವ ದಿನನೂ ನಿಶ್ಚಯ ಆಗಿತ್ತ್. ಅಷ್ಟರ್‌ಲಿ ಕರ್ನಾಟಕ ವಿಧಾನಸಭಾ ಚುನಾವಣೆ ಘೋಷಣೆ ಆಗಿ ನೀತಿ ಸಂಹಿತೆ ಜಾರಿ ಆದ ಕಾರಣಂದ ತಡ ಆಗಿ ಪುಸ್ತಕನ ಅನಾವರಣ ಮಾಡ್ದೊ.

ಹಿನ್ನೋಟ

# ಹಳೇ ನೆನಪುಗಳ ಚಿಂತನೆ

ಮನುಷ್ಯರ ಜೀವನಲಿ ಕಾಲ ಹೋದಂಗೆ ಬದಲಾವಣೆಗ ಆದು ಸಾಮಾನ್ಯ. ಆದರೆ ಅಂದ್‌ನ ಜೀವನದ ಪರಿ ಇಂದ್ ಇಲ್ಲೆ. ಅಂದ್ ಅವಿಭಾಜ್ಯ ಕುಟುಂಬಗಳ ಅಂದರೆ ಕೂಡು ಕುಟುಂಬಗಳ ಅನ್ಯೋನ್ಯ ಪ್ರೀತಿ, ವಿಶ್ವಾಸಂದ ಕೂಡಿ ಜೀವನ ಮಾಡುವ ಪದ್ಧತಿ ಎಲ್ಲವೂ ಮರೆ ಆಗಿ ಹೋತು. ಸಣ್ಣ ಪ್ರಾಯದವು ದೊಡ್ಡ ಪ್ರಾಯದವುಕ್ಕೆ ಕೊಡುವ ಭಯ, ಭಕ್ತಿ ದೊಡ್ಡವು ಸಣ್ಣವುಕ್ಕೆ ಕೊಡವು ಪ್ರೀತಿ ವಿಶ್ವಾಸ ಎಲ್ಲಾ ಮರೆಯಾಗಿ ಹೋತು. ಅಂದ್ ರಾಮ ರಾಜ್ಯ, ಎಂದರೆ ದೇವರ ಪ್ರಜಾಪ್ರಭುತ್ವ. ಇಂದ್ ಪ್ರಜಾಪ್ರಭುತ್ವ. ಇಂದ್ ಯಾಂತ್ರಿಕ ಯುಗ. ಅಂಗೈಲೇ ಪ್ರಪಂಚನ ಕಾಣುವ ಸೌಭಾಗ್ಯ.

ನಮ್ಮ ದೇಶ ಕೃಷಿಗೆ ಹೆಸ್‌ರ್‌ವಾಸಿಂತ ಹೇಳ್ತು ಎಲ್ಲವುಕೂ ಗೊತ್ತು. ನಾವು ಸಣ್ಣ ಮಕ್ಕಳಾಗಿರ್ಕ್‌ನ ಮನೆ ಮುಂದೆ ಕಾಣುವ ಬತ್ತದ ಗದ್ದೆ ಕಡೆ ನೋಡ್ಕನ, ನಮ್ಮ ಹಿರಿಯವು ಎತ್ತ್‌ಗಳಂದ ಗದ್ದೆ ಹೂಡುದು, ಮತ್ತೆ ಮಧ್ಯಾಹ್ನದ ಮೇಲೆ ಊರ್‍ನ ಸ್ನೇಹಿತರೆಲ್ಲಾ ಒಟ್ಟಿಗೆ ಸೇರಿಕಂಡ್ ನಾ ಮುಂದೆ ತಾ ಮುಂದೆಂತಾ ಪೈಪೋಟಿಲಿ ನಾಟಿ ನೆಡುದು, ಸಂತೋಷಲಿ ಕೂಗಾಡುದು, ನಾಟಿ ಕೂಡಿಕಾಕನಾ ತುಳು ಬಾಷೆಲೀ "ಇಂದೊಂಜಿ ಕಂಡಾ, ಮಲ್ಲಾ ಕಂಡಾ, ನಾಟಿ ಕೂಡೋಣುತ್ತಾ ಬತ್ತ್‌ಂಡ್ ಹೋಲೆ ಹೊಯ್ಯಾ," ಹೇಳಿಕಂಡ್ ಹೊಯ್ಯ ಹಾಕ್‌ತಿದ್ದೊ. ಮತ್ತೆ ದೊಡ್ಡ ಗದ್ದೆ ಆದರೆ ಗದ್ದೆ ಮೂಲೇಲಿ ಗಣಪತಿಗೆ ಒಂದು ಎಡೆ ಮಡ್‌ಗ್‌ತ್ತಿದ್ದೊ. ಅದ್ಕೆ ಗಣೋದಿತ ಹೇಳುತ್ತಿದೊ. ಈಗ ಅದ್ ಎಲ್ಲಾ ಮಾಯ ಆತ್. ಹಂಗೆನೇ ಹೆಣ್ಮಕ್ಕ ಅಗೆ ತೆಗಿಕನಾ ಸೋಬಾನೇ ಹೇಳಿಕಂಡ್ ಕುಷಿಪಡ್‌ತ್ತಿದೊ. 'ಕೈ ಕೆಸರಾದರೆ ಬಾಯಿ ಮೊಸ್‌ರ್'ಂತ ಹೇಳ್ವಂಗೆ ರೈತರೇ ಕೆಲಸಮಾಡಿ ಸಂಪಾದನೆ ಮಾಡುತ್ತಿದ್ದೊ. ಬಸವಣ್ಣನವು ಹೇಳ್ದ್‌ಂಗೆ ಕಾಯಕವೇ ಕೈಲಾಸ. ಇಂದ್ ಯಂತ್ರಗಳಂದ ಹೂಡಿ ಗದ್ದೆ ನೆಟ್ಟವೆ. ಕೂಲಿ ಕೆಲಸದವರ್‌ಂದ ಕೆಲಸ ಮಾಡಿಸುವೆ. ಬೇಸಾಯ ಮಾಡಿರೂ ಕೂಡಾ ಈಗ ಅಷ್ಟ್‌ಕಷ್ಟೆ. ಬರೀ ಒಂದು 25% ಮಾತ್ರ. ಬಾಕಿ ಎಲ್ಲಾ ಗದ್ದೆಗಾ ಹಾಳ್‌ಬಿದ್ದ್‌ಕಂಡ್ ಉಟ್ಟು.

ಹಿಂದೆ ರೈತರ್ ಬೆಳೆದ ಬತ್ತನ ಅವರವರ ಮನೆಗಳಲ್ಲೆ ರಾಟೆಂದ ಮತ್ತೆ ಒಣಕೆಂದ ಕುಟ್ಟಿ ಅಕ್ಕಿ ಮಾಡಿ ಉಂಬೊತ್ತಿದ್ದೊ. ಆ ಅಕ್ಕಿಲಿ ಒಳ್ಳ ವಿಟಮಿನ್ ಪದಾರ್ಥ ಇರ್‌ತಿತ್. ಎಲ್ಲವೂ ಆರೋಗ್ಯಂದ ಇರ್‌ದೊ. ತುಂಬಾ ವರ್ಷ ಬೊದ್ಕುತ್ತಿದ್ದೊ. ಪ್ರತೀ ಮನೆಗಳಲಿ ಹಾಲ್ ಮೊಸರ್ ತೊಪ್ಪುತ್ತಿತ್‌ಲೆ. ತರಕಾರಿ ಬೇಕಾದಷ್ಟ್ ಬೆಳ್‌ಸ್ತಿದ್ದೊ.

ಹಿಂದೆನಾ ಕಾಲಲೀ ಬಸವನ ಆಟದವು ಮನೆ ಮನೆಗಳಿಗೆ ಬಾತಿದ್ದೊ. ಬಸವನ ಆಟತ್ತೇಳ್ರೆ ಒಂದು ಎತ್ತ್ ಮತ್ತೆ ಒಂದು ಹಸ್‌ನ ಶೃಂಗಾರ ಮಾಡಿ ತಮಟೆ ಬಾರಿಸಿಕಂಡ್, ವಾಲಗ ಊದಿಕಂಡ್ ಮನೆ ಮುಂದೆನ ಅಂಗಳಲಿ ಬಸವಂಗೆ ಸೀತೆನ ಮೊದವೆ ಮಾಡ್ದುತ ತಮಾಸೆ ಮಾಡಿಕಂಡ್ ನಿಲ್ಲ್‌ತ್ತಿದ್ದೊ. ಆಗ ಮನೆವು ಬಸವ ಮೇಲೆ ಬಟ್ಟೆಬರೆ ಹಾಕಿ, ಬಸವ ಆಟದವಂಗೆ ಅಕ್ಕಿ, ದುಡ್ಡು ಕೊಡ್ತಿದ್ದೊ. ಈಗ ಎಲ್ಲಿ ಹೋತು ಬಸವ ಆಟ?

ಹಿಂದೆ ಆಟಿ ತಿಂಗಲಿ ಆಟಿ ಕಳಂಜ ಎಂದರೆ ಕಾಪಾಳವೇಷ ಹಾಕಿಕಂಡ್ ಬಾಳೆ ತರ್‌ಗ್‌ನಾ ಮೈ ಮೇಲೆಲ್ಲಾ, ಸುತ್ತಿಕಂಡ್, ಕಾಲಿಗೆ ಗೆಜ್ಜೆ ಕಟ್ಟಿಕಂಡ್ ಮನೆ ಮುಂದೆ ಅಂಗಳಲಿ ಕೋಣಿತ್ತಿದ್ದೊ. ಆಗ ಸಣ್ಣ ಮಕ್ಕ ಹೆದ್‌ರಿ ಮನೆ ಒಳಗೆ ಸೇರುತ್ತಿದೊ. ಆಟಿಕಳಂಜಂಗೆ ಒಂದಷ್ಟ್ ಅಕ್ಕಿ, ಬತ್ತ, ದುಡ್ಡು ಕೊಡ್ತಿದ್ದೊ. ಈಗ ಎಲ್ಲಿ ಹೋದೊ ಆಟಿ ಕಳಂಜರ್.?

ಶಿವರಾತ್ರಿ ಬಾಕನಂತೂ ಮಕ್ಕಳಿಗೆ ಖುಷಿಯೋ ಖುಷಿ. ಆ ದಿನ ನೆರೆಕರೆ ಮಕ್ಕ ಎಲ್ಲಾ ಒಟ್ಟಿಗೆ ಸೇರಿಕಂಡ್ ಶಿವರಾತ್ರಿನ ಜಾಗರಣೆತ ಊರುನ ಮನೆ ಮನೆಗಳಿಗೆ ಹೋಗಿ ಮನೆ ಬಾಗ್‌ಲ್ ಹಾಕಿದ್ದರೆ, ಬಾಗ್‌ಲ್ ತಟ್ಟಿ "ಬಾಗಿಲು ತೆರೆಯಿರಿ ಭಿಕ್ಷೆಯ ನೀಡಿರಿ ಬಂದಿಹೆನಾ ತಿರುಕನಿಯೇ"ಂತ ಹೇಳಿಕಂಡ್ ಬಾಗ್‌ಲ್ ತಟ್ಟಿ ಮನೆಯವರ ಏಳುಸುತ್ತಿದೊ. ಹಂಗೇನೆ ಮಕ್ಕ ಹಾಡುತ್ತಿದೊ. ಆಗ ಮನೆವು ಒಂದಿಷ್ಟ್ ಅಕ್ಕಿ, ಬೆಲ್ಲ, ದುಡ್ಡು ಕೊಡ್ತಿದ್ದೊ. ಮಕ್ಕ ಮಾರಣೆ ದಿನ ಸ್ನಾನ ಮಾಡಿ ಪಾಯಸ ಮಾಡಿ ಊಟ ಮಾಡುತ್ತಿದೊ. ನಾನು ಕೂಡ ಅಂದ್‌ನ ಕಾಲಲಿ ಈ ಕಾರ್ಯಕ್ರಮಲಿ ಭಾಗವಹಿಸೊಳೆ.

ಹಿಂದೆ ಕುಂಬಾರ ಮನೆ ಮನೆಗಳಿಗೆ ಚಟ್ಟಿ ಕುಡಿಕೆಗಳನಾ ಹೊತ್ತ್‌ಕಂಡ್ ಬಾತಿತ್ತ್. ಆಗ ಮನೆವು ಅವುಕೆ ಬೇಕಾದ ಚಟ್ಟಿ ಕುಡಿಕೆಗಳನಾ ದುಡ್ಡ್‌ಕೊಟ್ಟ್ ತಕಣ್ತಿದ್ದೊ. ಈಗ ಕುಂಬಾರ ಎಲ್ಲಿ ಬಂದದೆ ಮನೆಗಳಿಗೆ? ಆದರೆ ಈಗ ಮಣ್ಣ್‌ನ ಪಾತ್ರೆಲಿ ಅಡಿಗೆ ಮಾಡುದೇ ಇಲ್ಲೆ. ಎಲ್ಲಾ ತಾಮ್ರ ಅಲ್ಯುಮಿನಿಯಂ ಪಾತ್ರಗಳೇ. ಈಗ ಪಾತ್ರಗಳ ಮಾರುವವ ಮನೆ ಮನೆಗಳಿಗೆ ಬಂದದೆ. ಆದರೆ ಮಣ್ಣ್‌ನ ಪಾತ್ರೆಗಳಲಿ ಮಾಡ್ದ ಅಡಿಗೆಯ ರುಚಿಯೇ ಬೇರೆ. ಆರೋಗ್ಯಕ್ಕೂ ಆಯುಷ್ಯಕ್ಕೂ ಒಳ್ಳೆದೇ.

ಹಿಂದೆ ವಾರಕ್ಕೊಮ್ಮೆ ಮನೆ ಮನೆಗಳಿಗೆ ಬಂದ್ ಒಗೆಯದ ಬಟ್ಟೆಗಳ ಗಂಟ್ ಮೂಟೆ ಕಟ್ಟಿಕಂಡ್ ಹೋಗುವ ಅಗಸರ್ ಇಂದ್ ಕಣ್ಮರೆಯಾದೊ. ಹಂಗೆನೇ ಕ್ಷೌರಿಕ ತಿಂಗಳಿಗೊಮ್ಮೆ ಮನೆ ಮನೆಗಳಿಗೆ ಹೋಗಿ ಮುಖ ಕ್ಷೌರ, ಕೂದಲು ಚಂದ ಮಾಡುವ ಕೆಲಸಗಳ ಮಾಡ್ತಿತ್ತ್. ಆಗ ಅವಂಗೆ ಒಂದಿಷ್ಟು ಅಕ್ಕಿ ದುಡ್ಡು ಕೊಡ್ತಿದ್ದೊ. ಬಳೆಗಾರ ಮನೆ ಮನೆಗಳಿಗೆ ಹೋಗಿ ಬಳೆಗಳ್ನ

ತೊಡಿಸಿ ಬಳೆಗಳಿಗೆ ಆಗುವ ಹಣ ತಕ್ಕಂಡ್ ಹೋತ್ತಿದ್ದೊ. ಈಗ ಎಲ್ಲಾ ಮಾಯ ಆತ್. ಈಗ ಬಳೆಗಾರ ಊರುಗಳಿಗೆ ಹೋಗದೆ ಇರುವ ಕಾರಣ ಜಾನಪದ ಗೀತೆಯೊಂದರಲ್ಲಿ ಮುತ್ತೈದೆ ಹೆಂಗಸೊಬ್ಬಳು ಈ ರೀತಿಯಾಗಿ ಬಳೆಗಾರಂಗೆ ಅವಳ ಊರುನ ಪರಿಚಯ ಮಾಡ್ದೆ:

"ಭಾಗ್ಯದ ಬಳೆಗಾರ ಹೋಗಿ ಬಾ ನನ್ನ ತವರೀಗೆ
ಹಂಚಿನ ಮನೆ ಕಾಣೊ, ಕಂಚಿನ ಕದ ಕಾಣೊ,
ಮಿಂಚೋಡುವ ಎರಡು ಗಿಳಿಕಾಣೊ
ಅದೇ ಕಾಣೊ ನನ್ನ ತವರೂರು... ಹಿಂಗೆ ಹಾಡ್ ಮುಂದ್‌ವರ್ದದೆ.

ಈ ಮೇಲಿನ ಎಲ್ಲಾ ಸಂಗತಿಗ ನಮ್ಮ ಜೀವನದ ಅವಿಭಾಜ್ಯ ಅಂಗಗ. ನಾವು ಇನ್ನ್ ಯಾಗ ಕಾಂಬೊಕ್ಕೆ ಉಟ್ಟು, ಮುಂದೆ ನಮ್ಮ ಪೀಳಿಗೆಗೆ ಕಾಂಬೊ ಕಾಲ ಬರಲಿ, ರಾಮರಾಜ್ಯ ಆಗಲಿ.

✍ಕಟ್ರತನ ಕೆ. ಬೆಳ್ಯಪ್ಪ.

ನಿವೃತ್ತ ಅಧ್ಯಾಪಕ
ಬಲಮುರಿ ಗ್ರಾಮ ಮತ್ತು ಅಂಚೆ,
ಮಡಿಕೇರಿ ತಾಲೂಕು,
ಕೊಡಗು – 571252
ಮೊ : 8197063328

## ಲೇಖಕರ ಕುರ್ತ್ :

ಶ್ರೀ ಕಟ್ರತನ ಕೆ. ಬೆಳ್ಯಪ್ಪನವು ಹಿಂಗಾರ ತ್ರೈಮಾಸಿಕಕೆ ಲೇಖನ ಬರ್ದ ಅತೀ ಹಿರಿಯ ಬರಹಗಾರರ್. ಅವ್ಕೆ ಈಗ 94 ವರ್ಷ ಪ್ರಾಯ. ಈ ಪ್ರಾಯಲೂ ಅವರ್ಲಿ ಬರೆವ ಹುಮ್ಮಸ್ಸ್ ಸಾಕಷ್ಟ್ ಉಟ್ಟು. ಯಾವ್ದೇ ಸಾಹಿತ್ಯ ಪರ ಸಭೆ ಸಮಾರಂಭ ಇದ್ದಲ್ಲಿ ಅವು ಅಲ್ಲಿ ಇದ್ದವೆ. ಅವರ ಗ್ಯಾನದ ಶಕ್ತಿ, ಚಿಂತನೆ ಮತ್ತೆ ಬರವಣಿಗೆ ಕೌಶಲ್ಯ ಮೆಚ್ಚುವಂತದ್ದಾವುಟು. ಅವು 90 ನೇ ವರ್ಷ ವಯಸ್‌ಲಿ "ಬೆಳ್ಳಿ ಮುಷ್ಟಿ" ಪುಸ್ತಕನ ಕನ್ನಡಲಿ ಬರ್ದೊಳೊ. ಆ ಪುಸ್ತಕ ಅರೆಭಾಷೆಗೆ ತರ್ಜುಮೆ ಆಗುಟ್ಟು. ಬೆಳ್ಯಪ್ಪನವರ ಸ್ಫೂರ್ತಿ ಕಿರಿಯವುಕ್ಕೆ ಮಾದರಿ ಆಗಲಿ. ಶ್ರೀಯುತರ ಬಾಳ್ ಆರೋಗ್ಯವಾಗಿದ್ದ್ ಸುದೀರ್ಘವಾಗಿ ಬಾಳಲಿತ ನಮ್ಮ ಹಾರೈಕೆ.

# ಕಾಲ ಬದ್‌ಲ್ ಅಲ್ಲ, ಕೋಲ ಬದ್‌ಲ್

ಇಂದ್‌ನ ಗೂಡೆಗಳ ಪೇಷನ್‌ನ ನೋಡ್ರೆ ಮನ್ಸ್‌ಗೆ ಬೇಜರ ಆಗ್‌ವಂತ ಅಂಶಗ ತುಂಬಾ ಕಂಡ್ ಬಂದದೆ. ಕೆಲವ್ ಗೂಡೆಗ ಜಡೆ ಹಾಕುದ್ಲೆ. ಹೆಚ್ಚಿನವ್ ಕೂದೊಲುನ ಹಂಗೇ ಇಳ್ಸಿ ಬುಟ್ಟವೆ. ಇಲ್ಲರೆ ಸಣ್ಣ ಜುಟ್ಟು ಕಟ್ವೆ. ಹೆಣ್ಣ್ ಮಕ್ಕ ಕಟ್ಟ್‌ವ ಜಡೆಗೆ ಅದರ್‌ದ್ದೆ ಆದ ಸ್ವಾರಸ್ಯ ಇತ್.

ಕಳ್ದ ದಿನಗಳ ನೆಂಪು ಮಾಡಿ ನೋಡಿರೆ! "ಅಮ್ಮಾ... ತಮ್ಮ ನನ್ನ ಜಡೆ ಎಳ್ದ್ ಹಾಳ್ ಮಾಡ್ದೆ"ತ ಮಗಕ ಅಯ್ಯೆಕಳ ಹಕ್ಕಲೆ ದೂರ್ ಹೇಳ್ತಿದ್ದೊ. ತಮ್ಮ ನೆಗಾಡಿಕಂಡ್ ಹೋಗಿ ಮೂಲೆಲಿ ಅಂಡ್ಗಿ ನಿಲ್ಲ್‌ತಿತ್. ಇನ್ನ್ ಹೈಸ್ಕೂಲ್ ಗೂಡೆಗಳ ಹಿಂದೆ ಕುದ್ದ ಹಯ್ದಂಗ ಜಡೆನ ಎಳೆತ್ತಿದ್ದೊ.

ಮನೆಗೆ ಬಂದ ಗೂಡೆಗ ಅಮ್ಮಂದರ ಒಟ್ಟಿಗೆ ಹೇಳಿಕಂಡ್ ಮರ್ದ್‌ಕನ ಹಯ್ದಂಗಳ ಸುದ್ದಿಗೆ ಹೋದು ಬೇಡ. ಅವು ಎಂತ ಮಾಡಿರು ಹೇಳಿರು ನಿನ್ನ ಪಾಡ್‌ಗೆ ಇದ್ದ್ ಬುಡ್‌ತ ಸಮಾದಾನ ಮಾಡ್ತಿದ್ದೊ.

ಕಾಲೇಜ್‌ಲಿ ಬೇರೆನೆ ಕಥೆ. ಗೂಡೆಗಳ ಚುಡಾಯಿಸುವ ಪೋಲಿ ಹಯ್ದಂಗ ಗುಂಪುಲಿ ಹೋಕನ ಗೊತ್ತ್ ಆಗದ ಹಂಗೆ ಹಿಂದೆಂದ ಹೋಗಿ ಜಡೆ ಎಳ್ದ್ ಗೂಡೆಗ ತಿರ್ಗಿ ನೋಡಿಕೆ ಮುಂದೆ ಅಂಡ್ಗ್‌ತ್ತಿದ್ದೊ.

ಸಿಟ್ಟ್ ಬಂದ್ ತಡಿಯಕೆ ಆಗದೆ ದೊಂಡೆ ಮುಟ್ಟ ಬಂದ್ "ತಲೆ ಸರಿ ಇಲ್ಲವಾ?" ಮಾತ್‌ನ ಮನ್ಸ್‌ಲಿ ನೆನ್ಸಿಕಂಡ್ ನಡೆತ್ತಿದ್ದೊ. ಇದ್ ಜಡೆನ ಕಥೆ.

"ಭಾಗ್ಯದ ಬಳೆಗಾರ ಹೋಗಿ ಬಾ ನನ್ನ ತವರೀಗೆ" ಇದ್ ಜನಪದದ ಜನ ಜನಿತ ಹಾಡ್. ಈ ಹಾಡ್ ಕೇಳ್‌ಕನ ಬಳೆಗಾರನ ನೆಂಪು ಆದೆ. ಹಿಂದೆನ ಕಾಲಲಿ ಹಬ್ಬ ಹರಿದಿನಗ ಬಂದರೆ ಸಾಕ್. ಎಲ್ಲಿ ಇದ್ದರು ಕೂಡ ಬಳೆ ಇಸಿಕೆ ಬಳೆಗಾರ ಬರ್ತಿತ್. ವರ್ಷಲಿ ಒಂದ್ ಸತಿ ಆದ್ರ್ ಎಲ್ಲವರ ಮನೆಗೆ ಹೋಗಿ ಬಳೆಗಾರನ ಅಮೂಲ್ಯವಾದ ಕೈಂದ ಹೆಣ್ಣ್ ಮಕ್ಕಳಿಗೆ ಬಳೆ ತೊಡ್ಸಿ ನಮ್ಮ ಸಂಸ್ಕೃತಿನ ಒಳ್ಸಿ ಎಲ್ಲವರ ಮನೆಲಿ ನಡಿವ ಶುಭ ಕಾರ್ಯನ ಇಡೀ ಸುತ್ತೆಲ್ಲಾ ಗೊತ್ತ್ ಮಾಡ್ತಿತ್. ಊರ್‌ಲಿ ಜಾತ್ರೆ ಸುರು ಆದರೆ ಸಾಕ್ ಅಲ್ಲಿ ಬಳೆ ಅಂಗಡಿಗಳದ್ದೇ ಸಂತೆಡ್ಕ ಆಗಿರ್‌ತ್ತಿತ್.

ಬಳೆಗಾರ ಹೆಣ್ಮಕ್ಕಳಿಗೆ, ಗೂಡೆಗಳಿಗೆ ಬೇಕ್ ಬೇಕಾದ ಬಣ್ಣ ಬಣ್ಣದ ಬಳೆಗಳ ತೊಡ್ಸ್‌ತ್ತಿದ್ದೊ. ಬಳೆ ತೊಡ್ಸಿಕಂಬಕೆ ಕುದ್ದೊವ್ ಬಳೆಗಾರನ ಜೋಳಿಗೆಗೆ ಕೈ ಮುಗ್ದ್ ಮೇಲೆಳ್‌ವ ಕ್ರಮ ಇತ್.

ಸಣ್ಣ ಪೊಡಿ ಮಕ್ಕಳ ಕುಸಿಗೆ ಲೆಕ್ಕನೇ ಇರ್ತ್ತಿತ್ತೆ. ಕೈನ ಕೊಣ್ಸಿಕಂಡ್ ಅತ್ತಂದ ಇತ್ತ– ಇತ್ತಂದ ಅತ್ತ ಓಡಾಡಿಕಂಡ್ ಬಳೆ ತೊಡ್ಸಿಕಂಡಳೆತ ಗೊತ್ತ್ ಮಾಡ್ತಿದ್ದೊ. ಎಲ್ಯಾರ್ ಒಂದ್ ಬಳೆ ಒಡ್ದ್ ಹೋದರೆ ಸಾಕ್ ರಾಗ ಎಳೆಕೆ ಸುರು ಮಾಡ್ತಿದ್ದೊ.

4ಒಮ್ಮೆ ನಾ ಮಾವನ ಮನೆಗೆ ಹೋಗಿರ್‌ಕನ ಅಲ್ಲಿಗೆ ಬಳೆಗಾರ ಬಂದಿತ್ತ್. ಎಲ್ಲವ್ ಬೇಕಾದ ಬಳೆಗಳ ತೊಡ್ಸಿಕಂಡೊ. ನಾನೂ ತೊಡ್ಸಿಕಂಡೆ. ನನ್ನ ಅತ್ತಿಗೆ ತಮಾಷೆಗೆ, ನಿನ್ನ ಬಳೆ ಒಡ್ದ್ ಹೋವುಟುತ ಹೇಳ್ತ್. ಆಗ ನಂಗೆ ಬೇಜರ ಆತ್ಲೆ. ಹಂಙಾ ಹೊತ್ತ್‌ಲಿ ನನ್ನ ಕೈಲಿದ್ದ ಒಂದ್ ಬಳೆ ಯಾದೊ ಕಾರಣಂದ ಒಡ್ದ್ ಹೋತ್. ನಂಗೆ ಆದ ಬೇಜರನ ತಡಿಯಕೆ ಆಗದೆ ಮನೆ ಹಿಂದೆನ ಗೋಡೆಗೆ ಒರ್‍ಗಿ ನಿತ್ತ್ ತೀರ್‌ವಷ್ಟ್ ಮರ್‍ಬದ್ ಈಗೊಳ್ ನೆಂಪು ಆದೆ.

**ನನ್ನ ಅಮ್ಮನ ಕೈಲಿ ಬಳೆಗ ಹಂಗೇ ಇರ್ತಿತ್ತ್. ಕಮ್ಮಿತೇಕ್ರೆ ಮೂರ್ ನಾಲ್ಕ್ ವರ್ಷಗಳವರೆಗೆ ಎರ್ಡ್ ಮೂರ್ ಹಳೆ ಬಳೆಗ ಹಂಗೇ ಇರ್ತಿತ್ತ್. ಆ ಬಳೆಗಳ ನಂಗೆ ತೋರ್ಸಿಕಂಡ್ ಜಾತ್ರೆಗಳ ನೆಂಪು ಮಾಡ್ತಿದ್ದೊ.**

ಹಿಂಗೆ ಅಂದ್‌ನ ಹೆಣ್ಮಕ್ಕ ಬಳೆಗಳ ಜಾಗ್ರತೆಲಿ ಇಸಿಕಂಬೊತ್ತಿದ್ದೊ. ಜಡೆನ, ಬಳೆಗಳ, ಜಾಗ್ರತೆಲಿ ಇಸಿಕಂಬೊದರ ನೋಡಿ ಕವಿಗ ಹೆಣ್ಮಕ್ಕಳ ವರ್ಣಸಿ ಕವಿತೆ ಬರೆತಿದ್ದೊ. ಬಳೆನ ಬಗ್ಗೆ ಬರಿಯಕನ ಬಳೆಗಳ ಶೃಂಗಾರ ಆಗಿಸಿ ಹೆಣ್ಮಕ್ಕಳಿಗೆ ಬಳೆ ತೊಡ್ಸಿ ತೊವುರು ಮನೆಗಳ ಪರ್‍ಚಯ ಮಾಡ್ಸಿ ಅಯ್ಯೆಕಳಿಗೆ ಕುಸಿ ಆಗ್‌ವ ಬಣ್ಣದ ಬಳೆಗಳ ಕವಿತೆನ ಮೂಲಕ ಹಾಡಿ ಹೊಗ್‌ಳ್ತಿದ್ದೊ.

ಹಿಂಗೆ ಜಡೆನ ಬಗ್ಗೆ ಕವಿತೆ ಬರ್ದ್ ಪ್ರೇಮಿ ಪ್ರಿಯತಮೆನ ಹಕ್ಕಲೆ ಹೋಗಿ ಇದ್ ನಾನೇ ಬರ್ದದ್ ಮತ್ತೆ ನಿಂಗಾಗಿ ಬರ್ದದ್ದ್‌ತ ಅವಳ ಎದ್‌ರ್ ಹಾಡ್‌ತ್ತಿದ್ದೊ.

ಆಗ ಪ್ರಿಯತಮೆ ನಾಚಿಕೆನ ಮುದ್ದೆ ಆಗ್‌ತ್ತಿತ್ತ್. ನಾಚಿಕೆನ ನೋಡಿ ಕವಿಗ ಮತ್ತೊಂದ್ ಕವನ ಬರೆತ್ತಿದ್ದೊ. ಈ ಎಲ್ಲಾ ಪೊರ್ಲುನ ಹಾಡ್‌ಗೆ ಕಾರಣ ಹೆಣ್ಣ್ ಮಕ್ಕ ಹಾಕುವ ಜಡೆ ಮತ್ತೆ ತೊಡುವ ಬಳೆಗ. ಇಂದ್ ಮಾತ್ರ ಬಳೆ ತೊಡುವರ, ಜಡೆ ಹಾಕುವರ ಸಂಖ್ಯೆ ತುಂಬಾ ಕಡ್ಮೆ ಆವುಟು.

ಬಳೆಗಾರ ಬಾಗ್‌ಲ್‌ಗೆ ಬಾದರ ಮರ್‍ತ್ ಬುಟ್ಟ್‌ಟು. ಗೂಡೆಗ ಜಡೆ ಹಾಕುವ ಕ್ರಮನೂ ಮರ್‍ತ್ ಬುಟ್ಟೊಳೊ. ಕವಿಗ ಜಡೆ ಮತ್ತೆ ಬಳೆನ ಕುರ್‍ತ್ ಕವನ ಬರಿದುಲೆ. ಪ್ರೇಮಿಗ ಅದರ ಹಾಡಿ ಪ್ರಿಯತಮೆನ ಹೊಗುಳ್ದು ಕೂಡ ಕಡ್ಮೆ ಆವುಟು.

ಇಂದ್ ನಾ ಬಳೆ ತೊಟ್ ಜಡೆ ಹಾಕಿ ಬಂದೊಳೆತ ಗೂಡೆ ಕುಸೀಲಿ ಹೇಳಿರೆ, ನಾ ಬಳೆನೇ ಹಾಕುದ್ಲೆ ಜಡೆ ಅಂತು ಕಟ್ಟುದೇ ಇಲ್ಲೆತ ಹಳ್ಳಿಲಿ ಕೂಡ ಕೇಳಿ ಬರ್‍ತ ಉಟ್ಟು. ಅಷ್ಟ್ ಉದ್ದದ ಕುದೊಲುನ ಜಡೆ ಹಾಕಿಕೆ ಆದ್ಲೆನಾ! ಕೈಗೆ ಬಳೆ ಇಸದ್ ಯಾಕೆತ ಕೇಳಿರೆ ತರತರದ ನೆವನಗಳ ಹೇಳ್‌ವೆ.

ದೊಡ್ಡ ನೆವನತ ಹೇಳಿರೆ ಅದ್ ಹಳೆ ಕಾಲದ ಪೇಷನ್ ಹಳೆಕಾಲದ ಗೌರಮ್ಮನ ಹಂಗೆ ಜಡೆ ಹಾಕಿ ಬಳೆಗಳ ಹಾಕಂಡ್ ಹೋದು ನಂಗೆ ಇಷ್ಟ ಇಲ್ಲೆ ನಾ ಈಗನ ಕಾಲದ ಗೂಡೆ. ಈ ಕಾಲ ಮಾಡರ್ನ್ ಆವುಟು. ನಾನು ಕೂಡ ಮಾಡರ್ನ್ ಆಕು. ಅದ್ಕೆ ನನ್ನ ಕೈನ ಬೋಳ್ ಮಾಡಿ ಕುದೊಲ್‌ನ ಇಳ್ಸಿ ಬುಟ್ಟಳೆ. ಇದ್ ಈ ಕಾಲದ ಪೇಷನ್‌ತ ಹೇಳ್‌ವೆ.

ಇನ್ನ್ ಕೆಲವ್ ಗೂಡೆಗ ನೋಡಿ ಬಳೆ ಹಾಕಿರೆ ಅದರ್‌ದ್ದೇ ಗಿಜಿ ಗಿಜಿ

ಸದ್ದ್. ಪೋನ್ ರಿಂಗ್ ಆದರು ಕೇಳ್ದುಲೆ. ಕೈಂದೆ ಬಳೆ ತೆಗೆಕುತ ಆದರೆ ಹತ್ತ್-ಇಪ್ಪತ್ತ್ ನಿಮಿಷ ಬೇಕು ಅಷ್ಟೆಲ್ಲ ಪುರುಸೊತ್ತು ನಂಗೆ ಇಲ್ಲೆ. ಆಪೀಸಿಗೆ ಹೊರ್ಡೊಕು ಆ ಹೊತ್‌ಲಿ ಚಪ್ಪಲ್ ಹಾಕಂಬಕೇ ಪುರುಸೊತ್ ಇಲ್ಲದ ಮೇಲೆ ಬಳೆ ಜಡೆ ಹಾಕಂಬಕೆ ಹೆಂಗೆ ಪುರುಸೊತ್ತ್‌ತ ತಿರ್‍ಗಿ ಕೇಳ್‌ವೆ. ಮತ್ತೆ ಕೆಲವ್ ಹಿಂದೆನ ಕಾಲಲಿ ಮನೆ ಬಾಗ್‌ಲ್‌ಗೆ ಬಳೆಗಾರ ಬರ್‍ತಿತ್ ಕೈಗೆ ಅವನೇ ಬಳೆ ತೊಡ್‌ಸ್ತಿತ್. ಈಗನ ಕಾಲಲಿ ಬಳೆಗಾರ ಎಲ್ಲಿ ಬಂದದೆ? ಫ್ಯಾನ್ಸಿ ಅಂಗ್‌ಡಿಲಿ ತರ ತರದ ಬಳೆಗ ಇದ್ದರು ಬಾಳಿಕೆ ಬರುವ ಬಳೆಗ ಇರ್‍ದುಲೆ. ಅಂತ ಬಳೆಗಳಿಗೆ ತಲೆಂದ ಮೇಲೆ ಕ್ರಯ ಕೊಟ್ಟ್ ದುಡ್ಡ್ ಹಾಳ್ ಮಾಡ್‌ವಲಿಂದ ಪಾನಿಪೂರಿ-ಮಸಾಲೆ ಪೂರಿ ತಿಂದರೆ ಹೊಟ್ಟೆನ ತುಂಬಿಸಿಕಣಕ್ಕ್‌ತ ಹೇಳ್‌ವೆ. ಮತ್ತೂ ಕೆಲವ್ ಬಳೆ ಮತ್ತೆ ಜಡೆ ಸರಿಯಾಗಿ ಮ್ಯಾಚ್ ಆದು ಸೀರೆ ಮತ್ತೆ ಲಂಗ ರೊವ್ಕೆಗೆ ಮಾತ್ರ. ಈಗನ ಹೊಸ ಹೊಸ ತರತರದ ಬಟ್ಟೆಗಳಿಗೆ ಬಳೆ, ಜಡೆ ಮ್ಯಾಚ್ ಆದುಲೆ.

ಜೀನ್ ಹಾಕಂಡ್ ಟೀ ಶರ್ಟ್ ಹಾಕಿ ಜಡೆ, ಬಳೆ ಹಾಕಂಡ್ ಹೋಕೆ ನಾಚಿಕೆ ಆದೆ. ಹಿಂಗೆ ಒಂದೊಂದ್ ನೆವನಗಳ ಹೇಳ್‌ವೆ. ಕೆಲವ್ ಜಡೆ, ಬಳೆ, ಬೊಟ್ಟ್ ಹಾಕಿ ಹೂವು ಮುಡ್ದವರ ನೋಡ್ರೆ ತಲೆ ನೇಚದೆ ದಾರಿ ತೆಲ್ಗಿ ಹೋಗವ್ ಒಳೊ.

ಮೊದುವೆ ಜಂಬರಗಳಿಗೆ ಹೆಣ್ಮಕ್ಕ ಬಳೆ ಹಾಕಂಡ್ ಹೋದವೆ. ಅದ್ ಚಿನ್ನದ ಬಳೆ ಮಾತ್ರ. ಮನೆಗೆ ಬಂದ ಕೂಡ್ಲೆ ಕೈನ ಬೋಳ್ ಮಾಡ್‌ವೆ! ಇಪ್ಪತ್ತ್-ಮೂವತ್ತ್ ಸಾವಿರ ದುಡ್ಡ್ ಕೊಟ್ಟ ಬಳೆ ಹಾಳ್ ಆಗದ ಹಂಗೆ. ಆದರೆ ಚಿನ್ನದ ಬಳೆಲಿ ಕುಪ್ಪಿ ಬಳೆಗಿರುವ ಯಾವ ನಾದ ಕೂಡ ಇಲ್ಲೆ. ಅದ್ಕೇ "ಬಂಗಾರಕಿಂತ ಬಳೆ ಲೇಸು"ತ ಕವಿಗ ಹೇಳ್ದ್. ಅಂದ್ ಭಾರತೀಯ ಸಂಪ್ರದಾಯದ ಹಂಗೆ ಬಳೆಗಾರ ಬಂದ್ ಬಳೆ ತೊಡ್ಸುದರ್ಲಿ ಇರುವ ಕುಸಿನೇ ಬೇರೆ ಇತ್. ಈಗ ನಮ್ಮ ಶುಭಕಾರ್ಯಗ ಬಳೆಗಾರಂಗೆ ಅಶುಭ ಆಗಿರೊಕು. ಅದ್ಕೆ ಬೇಕಾಗಿ. "ಭಾಗ್ಯದ ಬಳೆಗಾರ ಸುರುಗೆ ನಮ್ಮ ಮನೆಗೆ ಬಾ. ಮತ್ತೆ ನೀ ನನ್ನ ತೊವುರು ಮನೆಗೆ ಹೋಗ್"ತ ಹಾಡ್‌ನ ಬದ್‌ಲ್‌ವ ಪರಿಸ್ಥಿತಿ ಬಂದುಟು.

ಇಂದ್‌ನ ಅಮ್ಮಂದರ್ ಜಡೆ ಕಟ್ಟಿಕೆ ಹೇಳ್ದುಲೆ. ಅವ್ಕೆ ಪುರುಸೊತ್ ಇರ್‍ದುಲೆ. ಕೆಲವ್ ಅಮ್ಮಂದರ್ ಮಗಕಳ್‌ಂದ ಜಾಸ್ತಿ ಪೇಷನ್ ಮಾಡ್ರೆ, ಮಗಕಳಿಗೆ ಯಾವ ಬಾಯಿಲಿ ಹೇಳಿಕಾದೆ?

ಎಲ್ಲಾ ಹೆಣ್ಮಕ್ಕ ಗೂಡೆಗ ಸೇರಿ ಸುಮ್ಮನೆ ಹೊಸ ಆಲೋಚನೆ ಯಾಕೆ ಮಾಡಿಕೆ ಆಗದ್? ಹೆಂಗೂ ಪ್ರೇಮಿಗಳ ದಿನನ ಆಚರ್‍ಸುವೆ. ಅದರ ಹಂಗೆ ಒಂದ್ ದಿನನ ಸಂಪ್ರದಾಯದ ದಿನತ ಯಾಕೆ ಆಚರ್‍ಸಿಕೆ ಆಗದ್? ಓ ಅಂದ್ ಎಲ್ಲವು ಬಳೆ ಜಡೆ ಬೊಟ್ಟ್ ಹಾಕಿ ಹೋಗೆ ಹೋಕಲಾ?

ಏನ್ ಹೇಳ್ರೆ?

✍ಉದಯಕುಮಾರಿ ಚೆಂಬು

ಚೆಂಬು ಗ್ರಾಮ,
ಮಡಿಕೇರಿ ತಾಲೂಕು.
ಮೊ : 9632900436

## ಸಂಸ್ಕೃತಿ – ಸಂಪ್ರದಾಯ

# ಅಡುಗೆ ಮನೆ, ಒಲೆ: ಪಾವಿತ್ರತೆ ಮತ್ತೆ ಸಂಸ್ಕೃತಿ

ಮಣ್ಣ್‌ಂದ ಒಲೆ ಮಾಡಿ ಅದರ ಮ್ಯಾಲೆ ಮಡಿಕೆ ನಿಲ್ಲಿಕೆ ತಟ್ ಮಾಡಿ, ಮಡಿಕೆ ಸುತ್ತಾ ಬೆಂಕಿ ತಾಂಗಿಕ್ಕಾಗಿ ಮಣ್‌ಂದ ಸಣ್ಣ ಸಣ್ಣ ಮೂರು ಗುಬ್ಬ ಮಾಡಿವೆ.

ಆ ಒಲೆಯ ಒಂದು ಕಡೆಗೆ ಒಂದು ಕಂಡಿ ಅಥವಾ ದೊಡ್ಡದಾದ ಮಾಳಿ ಮಾಡಿ ಅದರ ತುದಿ ಒಲೆಗೆ ತಟ್ಟ್ ಮಾಡ್ದ ಜಾಗಲಿ ಈ ಮೂಲ ಒಲೆಂದ ಸ್ವಲ್ಪ ದೂರಲಿ ತಟ್ಟ್ ಮಾಡ್ದ ಜಾಗಲಿ ಮೂರು ಗುಬ್ಬಿ ಮಾಡಿ ಇಟ್ಟವೆ. ಇದ್ ಯಾಕೆತ್ತೇಳಿರೆ ಮೂಲ ಒಲೆಂದ ಬೆಂಕಿ ಈ ಕಣ್ಣ್ ಒಲೆಗಾಗಿ ಹೋಗಿ ಅಲ್ಲಿ ಮೇಲಕ್ಕೆ ಬರುಕುತ್ತಾದರೆ ಅಲ್ಲಿ ಸಹ ಗಾಳಿ ಹೊರಗೆ ಹೋಕಲ್ಲಾ, ಆ ಕಂಡಿ ಪಾತ್ರೆ ಮಡ್ಗಕನ ಪೂರ್ತಿ ಮುಚ್ಚಿ ಹೋದರೆ ಬೆಂಕಿ ಅಲ್ಲಿಗೆ ಹೋದುಲೆ.

<u>ಮಣ್ಣ್ ಒಲೆಯ ಪವಿತ್ರತೆ:-</u>

ಈ ಮಣ್ಣ್‌ನ ಒಲೆ ಹೊತ್ತಿಸಿಕೆ, ಸೌದೆಯಲ್ಲದೆ ಬ್ಯಾರೆ ಯಾವುದನ್ನ ಸಹ ಉಪಯೋಗಿಸಿಕಾದುಲೆ. ಹಿಂದೆ ನಮ್ಮ ಅಪ್ಪ, ಅಜ್ಜಿ ಈಗಿನವುಕೆ ಏನ್ ಹೇಳುತ್ತಿದ್ದೊ ಗೊತ್ತ, ಒಲೆತ್ತೇಳಿರೆ ಲಕ್ಷ್ಮೀ, ಇದನ್ನ ಮೆಟ್ಟಿಕ್ಕಾಗದ್. ಒಲೆ ತಿಂಟೆಲಿ ಕೂರಿಕಾಗದ್. ಹೆಣ್ಣ್ ಮಕ್ಕ ಬೆಳಿಗೆ ಎದ್ದ್ ಹೊರಗೆ ಹೋಗಿ ಕೈಕಾಲ್ ಮುಖ ತೊಳ್ದ್ ಬಂದ್ ಒಲೆ ಬೂದಿ ಎತ್ತಿ ಒಲೆತಿಂಟೆನ ಗುಡಿಸಿ ಅದರ ಮೇಲೆ ಸಗಣಿ ಸಾರಿಸಿ ಮತ್ತೆ ತಾಯಿ ಭಾಗ್ಯ ಲಕ್ಷ್ಮೀತ್ತೇಳಿ ಒಲೆಗೆ ಸೌದೆ ಇರ್‌ಸಿ ಅಡುಗೆ ಪಾತ್ರೆನ ನೀರ್ ತುಂಬಿಸಿ ಯಾವುದೇ ಕಾರಣಕ್ಕೆ ಖಾಲಿ ಪಾತ್ರೆ ಒಲೆಮ್ಯಾಲೆ ಮಡ್‌ಗ್‌ತಿತ್ತ್‌ಲೆ. ಇನ್ನೊಂದು ವಿಚಾರ ಮದುವೆ ಮಾಡಿ ಹೆಣ್ಣ್ ಕರ್‌ಕಂಡ್ ಬಂದಂಗೆ ಗೂಡೆನ ಮಡ್‌ಲಕ್ಕಿ ಕಟ್ಟಿದ ಅಕ್ಕಿನ ನೆಲ್ಲಕ್ಕಿ ಅಡಿಲಿ ಬಿಚ್ಚಿ ಮತ್ತೆ ಅದೇ ಅಕ್ಕಿನ ಪಾಯಸ ಮಾಡಿ ಕಾರಣಕ್ಕೆ ಹಾಕಿ ಮತ್ತೆ ಬಂದ್ ಬಳಗದವ್‌ಕೆ ಹೊಸ್‌ಬಿ ಇಕ್ಕ್‌ತ್ತಿದ್ದದ್. ಅದರ್‌ಂದಾಗಿ ಹೊಸ್‌ಬಿ ಮನೆ ಹತ್ತಿದಂಗೆ ಅವಳ ಅತ್ತೆ ಅಥವಾ ನಾದಿನಿ ಅಥವಾ ಗೊತ್ತಿದ್ದವರೊಟ್ಟಿಗೆ ಕೇಳ್‌ತ್ತಿದ್ದದ್. ಅಡುಗೆ ಮನೆ ಯಾವುದ್‌ತ್ತೇಳಿ, ಅಡುಗೆ ಮನೆಯ ಭಾಗ್ಯಲಕ್ಷ್ಮಿ ಸದಾ ಜೀವನಕೆ ಆದಾರವಾದ ಒಂದ್ ನಡ್‌ಪು. ಈ ಅಡುಗೆಮನೆ ಎಲ್ಲಿಯವರೆಗೆ ತುಳುಕಾಡುತ್ತಿದ್ದದೆಯೋ ಅಲ್ಲಿಯವರೆಗೆ ಆ ಕುಟುಂಬ ಸೌಭಾಗ್ಯ ಸಂಪನ್ನರಾಗಿ ಇದ್ದವೆ. ನಾವು ನೀವೆಲ್ಲಾ ದುಡಿಯದು

ಹೊಟ್ಟೆ ಹಸಿವಿನ ಇಂಗಿಸಿಕ್ಕಾಗಿ ಅಥವಾ ಬಂದು ಬಳಗದವರ ಮನಃ ಸಂತೋಷಪಡಿಸಿ ಆಶೀರ್ವಾದ ಪಡೆಯಕ್ಕಾಗಿ ಇರುವಂತದ್ದೆ ಈ ಒಲೆ, ಈ ಅಡುಗೆ ಮನೆ. ಆದರೆ ಈಗಿನ ನಮ್ಮ ಅಕ್ಕ ತಂಗೆಕ ಕೇಳಿವೆ, ಯಾಕೆ ಗ್ಯಾಸ್‌ಂದ ಇದನ್ನೆಲ್ಲಾ ಮಾಡಿಕಾದುಲೆಂತ್ತೇಳಿ. ಮಾಡಕ್ ಖಂಡಿತಾ ಮಾಡಕ್. ಸಂಸ್ಕೃತಿ ಇರುದುಲೆ.

ಹಾಸಿಗೆಂದ ಎದ್ದ ತಕ್ಷಣ ಗ್ಯಾಸ್ ಉರಿಸಿವೆ, ನೀರ್ ಅಥವಾ ಕಾಫಿ ಗ್ಯಾಸ್ ಮ್ಯಾಲೆ ಇಟ್ಟವೆ, ಮತ್ತೆ ಕಡೆಗೆ ಹಲ್ಲುಜ್ಜುದು ಮುಖ ತೊಳೆಯದು. ಈ ಅಡುಗೆ ಮನೆಯ ಇನ್ನೊಂದು ವಿಶೇಷತ್ತೇಳಿರೆ, ಕತ್ತಲಾದ ಮ್ಯಾಲೆ ಕೈಕಾಲ್ ಮುಖ ತೊಳ್ದ್ ದೇವರಿಗೆ ದೀಪ ಮಡಗಿ ಕರ್ಪೂರ, ಸಾಂಬ್ರಾಣಿ ಅಥವಾ ಊದುಬತ್ತಿ ಹೊತ್ತಿಸಿಟ್ ದೇವರ ಭಜನೆ ಮಾಡಿ ವಿಭೂತಿ, ಅರಶಿಣ ಕುಂಕುಮದ ಬೊಟ್ಟು ಹಾಕಿ ಆದ ಮ್ಯಾಲೆ ಅವ್ವ, ಅಪ್ಪ ಮಕ್ಕ ಅಥವಾ ಸ್ವಲ್ಪ ದೊಡ್ಡ ಕುಟುಂಬಸ್ಥರಾದರೆ ಅವೆಲ್ಲ ಸೇರಿಕಂಡ್ ಮಣೆ, ಮುಕ್ಕಾಲ್ ತಕಂಡ್ ಒಲೆ ಕರೆಲಿ ಕುದ್‌ಕಂಡ್ ನಮ್ಮ ಹಿಂದೆನ ನಡಪುಗಳನ್ನ, ಹಂಗೆನೆ ಅಜ್ಜಿ ಕಥೆಗಳ್ನ, ಒಗಟ್‌ಗಳ್ನ (ಅಂದರೆ ಬಿಡಿಸುವ ಕಥೆ) ಹೇಳ್‌ತಿದ್ದ್, ಇದನ್ನೆಲ್ಲಾ ಹೇಳಿಕಂಡ್ ಇರ್‌ಕಾಕನ ನಮ್ಮ ಅವ್ವ ಅಥವಾ ಅಜ್ಜಿ ಯಾರಾದರೊಬ್ಬ ಒಲೆ ಬುಡಲಿ ಕುದ್ದ್‌ಕಂಡ್ ಒಡ್‌ದ್ ಹೋದ ಮಣ್ಣ್‌ನ ಮಡ್‌ಕೆನ ಒಂದ್ ಕಡೆ ಸ್ವಲ್ಪ ದೊಡ್ಡ ಕಂಡಿ ಮಾಡಿ ಅದನ್ನ ಒಲೆ ಮ್ಯಾಲೆ ಇಟ್ಟ್ ಹಲ್ಸಿನ ಬೀಜನ ಹಾಕಿ ಸೆಟ್‌ಗಲಿ ಆಡಿಸಿಕಂಡ್ (ತಿರುಗಿಸಿಕಂಡ್) ಹೊರ್‌ದ್ ಆದಮ್ಯಾಲೆ ಅದನ್ನ ನೆಲಕ್ಕೆ ಸೊರ್‌ಗುದು. ಮತ್ತೆ ಒಂದ್ ಮಣೆ ತಕಂಡ್ ಅದನ್ನ ಉಜ್ಜಿ ಉಜ್ಜಿ ಸಿಪ್ಪೆ ತೆಗೆದ್ ಎಲ್ಲವೂ ಹಂಚಿಕಂಡ್ ತಿಂಬತ್ತಿದ್ದೊ. ಇನ್ ಸ್ವಲ್ಪ ಜಾಸ್ತಿ ಹೊರ್‌ದಿದ್ದರೆ ಬೆಳಿಗ್ಗೆ ರೊಟ್ಟಿಗೆ ಅದನ್ನೆ ಪಜ್ಜಿ ಮಾಡ್‌ತ್ತಿದ್ದೊ. ಸ್ವಲ್ಪ ದೊಡ್ಡ ದೊಡ್ಡ ತುಂಡ್ ಮಾಡಿ ಅದನ್ನ ಕಲ್ಲಿಂದ ಗುದ್ದಿ ಗುದ್ದಿ ಮಾರನೆ ದಿನಕ್ಕೆ ಸಾರ್ ಸಹ ಮಾಡ್‌ತ್ತಿದ್ದೊ. ಈ ಒಂದ್ ಕೂಡು ಕುಟುಂಬದ ಒಟ್ಟಿಗೆ ಸೇರಿಸಿಕಂಡ್ ಕಷ್ಟ ಸುಖಗಳ್ನ ಮಾತಾಡಿಕಂಡ್, ಮಕ್ಕಳಿಗೆ ಬುದ್ದಿವಾದ ಹೇಳಿಕಂಡ್ ಹೊಟ್ಟೆ ತುಂಬಾ ಉಂಡ್ ಸಂತೋಷಲಿ ಮಲಗಿ ನಿದ್ದೆ ಮಾಡ್‌ಕುತ್ತಾದೆ. ಈ ಅಡುಗೆ ಮನೆ ಮತ್ತು ಸೌದೆಂದ ಹೊತ್ತುವ ಬೆಂಕಿಯೇ ಮನೆ ಬೆಚ್ಚಂಗೆ ಇರಿಕೆ ಮೂಲ ಆಧಾರದ ಕಾಲ ಇನ್ ಬಾದುಲೆತ ಆದೆ.

✍ ವೇದಾ ದಯಾನಂದ

ಪಾಕ ಮುಕ್ಕಾಟಿ
ಮಡಿಕೇರಿ ತಾಲೂಕು.
ಕೊಡಗು ಜಿಲ್ಲೆ.

# ಒಳ್ಳೆಮೆಣಸ್

ಇದ್ ಅನಾದಿ ಕಾಲಲಿ ಕಾಡ್‌ಲಿ ಹುಟ್ಟಿಬೆಳ್ದ ಬಳ್ಳಿ. ಇದ್‌ಕ್ಕೆ ಇಂದ್‌ನ ಕಾಲಲಿ ಇಷ್ಟೊಂದು ಬೇಡಿಕೆ ಯಾಕೆ? ಅದಲ್ಲದೆ ನಮ್ಮ ಗೌಡ ಜನಾಂಗದವು ಮದುವೆಲಿ ಶ್ರೀ ವೆಂಕಟರಮಣ ಸ್ವಾಮಿ ಹೆಸರ್‌ಲಿ ಹರಿಕೆಗೆ ಕಟ್ಟಿ ಇಡುವಂತ ಪದ್ಧತಿ ಯಾಕೆ? ಇದನ್ನ ಅಂದ್‌ಂದ ಇಂದ್‌ನವರೆಗೂ ರೂಢಿಸಿಕಂಡ್ ಬಾಕೆ ಏನ್ ಕಾರಣ ಇರ್‌ದು?

ಇದ್ ಸಾಧಾರಣವಾಗಿ ನಾವು ತಿಂಬಂತ ಎಲೆನ (ವಿಳ್ಯದೆಲೆನ) ಹೋಲುವಂತ ಬಳ್ಳಿ. ದೂರಂದ ನೋಡಿಕೆ ಸಹ ಒಂದೇ ತರ ಬಳ್ಳಿ. ಬೆಳಿಯದು ಸಹ ಒಂದೇ ತರಲಿ. ಬಳ್ಳಿಗೆ ನೀರ್, ಗೊಬ್ಬರ ಬೇಕಾಗಿಲ್ಲೆ. ಆಧಾರಕ್ಕೆ ಮರ ಬೇಕೇ ಬೇಕು. ಇಲ್ಲದಿದ್ದರೆ ಇದರ ಬೆಳವಣಿಗೆ ಇಲ್ಲೆ. ಈ ವೈಜ್ಞಾನಿಕ ಕಾಲಲಿ ಇದರ ಬೆಳವಣಿಗೆ ಗುಣಮಟ್ಟ, ಪ್ರಯೋಜನ ಮತ್ತು ಬೇಡಿಕೆಗಳನ್ನ ಅವಲಂಭಿಸಿ ದೇಶ–ವಿದೇಶಗಳ್‌ಲಿ ಸಹ ಬೆಳೆಯುತ್ತೊಳೊ ಗಡ. (ನಾನೆಂದು ವಿದೇಶಗಳಿಗೆ ಹೋತ್ಲೆ) ಕೇಳಿ ತಿಳ್‌ಕಂಡದ್‌ನ ನಿಮ್ಮ ಮುಂದೆ ಹೇಳಿಕಣ್ತೊಳೆ. ಆದರೆ ಆ ಕಾಳು ಮೆಣ್‌ಸ್‌ನ ಪ್ರಯೋಜನ ಪ್ರತಿಯೊಂದು ದೇಶಲಿ ಅತ್ಯಾವಶ್ಯಕತ್ತೇಳ್ದು ಮಾತ್ರ ನೂರಕೆ ನೂರುಪಾಲ್ ಸತ್ಯ.

ಕಾಡ್‌ಲಿ ಅದಾಗಿ ಹುಟ್ಟಿ ಬೆಳೆಯುವ ಮೆಣಸ್‌ನ ಗಾತ್ರ ನಾವು ನಾಡ್‌ಲಿ ನೆಟ್ಟ್‌ಬೆಳ್ಸುವ ಒಳ್ಳೆಮೆಣಸ್‌ಗಿಂತ ಸ್ವಲ್ಪ ಸಣ್ಣದ್. ಹಂಗೆನೆ ಸ್ವಲ್ಪ ಚಪ್ಪೆ. ಕಾಡ್‌ಲಿ ಹುಟ್ಟಿ ಬೆಳೆಯುವ ಮೆಣಸ್‌ಗೆ ಯಾವುದೆ ರೋಗ ರುಜಿನ ಇರುದುಲೆ. ಆದರೆ ನಾವು ನೆಟ್ಟ್ ಬೆಳ್ಸಿದ ಒಳ್ಳೆ ಮೆಣಸ್‌ಗೆ ಅಂದರೆ ಅದರ ಬಳ್ಳಿಗೆ ಎಲ್ಲಿಲ್ಲದ ರೋಗಗ. ಈ ಕಾಡ್ ಒಳ್ಳೆಮೆಣಸ್‌ನ ಒಂದು ಕುಟುಂಬತ್ತೇಳಿರೆ ನಾಡೊಳ್ಳೆ ಮೆಣಸ್. ಈಗ ನೋಡಿ ನಾವು ಕಾಡ್ ಮಾವಿನ ಗಿಡಕ್ಕೆ ಕಸಿ ಮಾಡಿ ಒಳ್ಳೆ ರುಚಿರುಚಿಯಾದ ದೊಡ್ಡ ದೊಡ್ಡದಾದ ಮಾವಿನ ಹಣ್ಣುಗಳನ್ನ ಪಡಿಯತ್ತೊಳೊ. ಆದರೆ ಜಾತಿ ಮಾವಿನ ಹಣ್ಣಿನ ಮೂಲವೇ ಈ ಕಾಡ್ ಮಾವಿನ ಹಣ್‌ನ ಗಿಡ, ಹಂಗೆನೆ ಈ ಕಾಡ್ ಒಳ್ಳೆಮೆಣಸ್‌ನ ಗಿಡನ ತಿಳ್ಳ್, ತಿಳಿಯದೆನೆ ಹಿಂದೆ ಕಡಿಯುತ್ತ ಬಂದಂಗೆ ಅದ್‌ರ್‌ಂದ ಬರುವಂತ ಬೆಳೆ ಇನ್ ಪುಷ್ಟಿಯಾಗಿ ಬೆಳ್ದ್ ನಿತ್ತದೆ. ಅದ್‌ರ್‌ಂದ ಬಂದಂತ ಪಸಲ್ ಬಹಳಷ್ಟ್ ಉತ್ತಮ ರೀತಿಲಿ ಇದ್ದ್ ಗುಣಮಟ್ಟಲಿ ಖಾರ ಜಾಸ್ತಿಯಾಗ್ತ ಬಾತ್. ಅಂದ್‌ನ ಅನಾಧಿಕಾಲಲಿ ಈ ಗಿಡದ (ಬಳ್ಳಿಯ) ಎಲೆನ ಮದ್ದಿಗೆ ಉಪಯೋಗಿಸುತ್ತಿದ್ದೊ, ಕಾಳ್‌ನ ಅಡ್‌ಗೆಗೆ

ಉಪಯೋಗಿಸುತ್ತಿದ್ದೊ, ಒಟ್ಟಾರೆ ಹೇಳುದಾದರೆ ಅನಾದಿ ಮೂಲಂದ ಬಂದಂತ ಈ ಕಾಳ್‌ಮೆಣಸ್ ನಮ್ಮೆಲ್ಲರ ವಾಣಿಜ್ಯ ಬೆಳೆಯಾಗಿ ನಿತ್ತುಟ್ಟು. ನೀವು ಎಲ್ಲೆ ಇರಿ. ಒಂದು ಹೂ ಗಿಡ ನೆಡುವ ಜಾಗ ನಿಮಗಿದ್ದರೆ ಅದರೊಟ್ಟಿಗೆ ಒಂದು ಗೊಬ್ಬರದ ಗಿಡ ನೆಡಿ. ಅದ್ ಮರ ಆದುಲೆ. ಅದಕ್ಕೆ ಎರಡು ಮೆಣ್‌ಸ್‌ನ ಬಳ್ಳಿ ನೆಟ್ಟ್, ಹಬ್ಬಿಕೆ ಬುಡಿ.

ಕಾಲದ ಪ್ರಕೃತಿ ನಿಯಮದ ಈ ಬಳ್ಳಿ ನಾಗರಿಕರ ಕಾಲದ ಮದ್ದಿಗಾತ್. ಉಟೋಪಚಾರದ ಅಡುಗೆಗಾತ್. ಒಳ್ಳೆಮೆಣ್ಸ್ ಬಾಣಂತಿಗಳಿಗೆ ಮದ್ದಾತ್. ಶೀತಕ್ಕೂ ಮದ್ದಾತ್ ಪ್ರಾಣಿಗಳಿಗೂ ಬೇಕಾತ್. ಇದನ್ನ ಆ ದೇವರು ನಮಿಗೆ ಕೊಟ್ಟದ್. ಆದರ್‌ಂದ ನಾವು ತಿಂಬಕ್ಕೆ ಮುಂದೆನೇ ದೇವರಿಗೆ ಒಪ್ಪಿಸೊನೊತ್ತೇಳುವಂತ ಅಭಿಪ್ರಾಯ ಅಂದ್‌ನ ಜನರಲ್ಲಿ ಮೂಡಿಬಂದಿರಕು.

ಈಗ ನಾವು ನಮ್ಮ ಹಿರಿಯವರ ಗ್ಯಾನ ಮಾಡಿಕಂಡ್ ಅವು ಜೀವಂತ ಇರ್‌ಕಾಕನ ತಿಂಬತ್ತಿದ್ದ ಅಡ್‌ಗೆನ ಮಾಡಿ ಅವರ್‌ನೆಲ್ಲಾ ಹೊಗಳಿಕಂಡ್ ಕಾರಣ ಹಾಕುವಂತ ಪದ್ಧತಿ ಇಂದಿಗೂ ರೂಢಿಯುಟ್ಟು. ಹಾಗೆ ಮುಂದೆನೂ ನಡ್ಸ್‌ಕಂಡ್ ಹೋದವೆತೇಳುವ ಅಭಿಪ್ರಾಯ. ಯಾಕೆತ್ತೇಳಿರೆ ಈಗೀಗ ಐನ್ ಮನೆಗಲ್ಲಿ ಹೆಚ್ಚ್ ಹೆಚ್ಚಾಗಿ ರೂಡಿಪಡಿಸಿಕಂಡ್ ಬರುತ್ತೊಳೊ. ಈಗ ನಾವು ಮದುವೆಲಿ ಒಂದು ಬೆದ್‌ರ್ ಅಥವಾ ವಾಟೆ ಗುತ್ತಿಯೊಳಗೆ ಮದುವಣ್ಣ ಯಾ ಮದುವಳಿಗೆಯ ಕೈಯಿಂದ ನೆಲ್ಲಕ್ಕಿ ಮುಂದುಗಡೆ ಕಾಳ್‌ಮೆಣಸ್ನ ಹಾಕಿ ಅದನ್ನ ಮಾವಿನ ಸೊಪ್ಪುಂದ ಒಂದು ಬೆದರ್ ಕಡ್ಡಿಯಿಂದ ಚುಚ್ಚಿ ಗಟ್ಟಿಮಾಡಿವೆ, ಹಂಗೆನೆ ಇನ್ನೊಂದು ಗೊಟ್ಟದೊಳಗೆ ಸ್ವಲ್ಪ ಅಕ್ಕಿ ಮತ್ತು ನಾಲ್ಕಾಣೆ ಪಾವಲಿ ಹಾಕಿ, ಬೆದರ್ ಕಡ್ಡಿಂದ ಚುಚ್ಚಿ ಚುಚ್ಚಿ ಗಟ್ಟಿಮಾಡಿ ಅಲ್ಲಿ ಕೂಡ್‌ದ ಕುಟುಂಬಸ್ಥರು, ಹಿರಿಯವು ಒಂದೆರಡ್ ಮಾತ್‌ಗಳನ್ನ್ ಹೇಳಿಕಂಡ್, ಮದುವಣ ಯಾ ಮದುವಳಿಗೆ ಹೆಸರ್ ಹೇಳಿ ಇಂತವರ ಕೈಯಿಂದ ಕುಲದೇವರು ವೆಂಕಟರಮಣ ಸ್ವಾಮಿಗೆ ಅಥವಾ ತಾಯಿ ದೇವರಿಗೆ ಹರಿಕೆ ಹಣತ ಕಟ್ಟಿಟ್ಟವೆ. ಈ ಹರಿಕೆ ಹಣ ಕಟ್ಟಿ (ಒಕ್ಕಲೆಜಮಾನರ) ಮುಡುಪು ಕಟ್ಟಿಟ್ಟ ಜಾಗಲಿ ಕಟ್ಟಿಟ್ಟವೆ. ಇದ್ ಐನ್‌ಮನೆಲಿ ಮದುವೆ ಆದರೆ ಮಾತ್ರ. ಇಲ್ಲದಿದ್ದರೆ ಜಂಬಾರ ನೆಡ್ಸವಂತವು ಅದನ್ನ ತೆಗೆದಿಟ್ಟ್‌ಕಂಡ್ ಹರಿಸೇವೆ ದಿನದಂದ್ ತಂದ್ ಮುಡುಪಿಗೆ ಹಾಕಿವೆ.

✍ಪೂಜಾರೀರ ಜಿ. ಮಾದಪ್ಪ.

# ಹಲ್‌ಸ್‌ನ ಮರದ ಮಹತ್ವ ಮತ್ತೆ ಅದರ ಉಪಯೋಗ

ಮನೆ ಕಟ್‌ಕಾಕನ ಮೂಡನ ತಾಯಿ ಬಾಗ್‌ಲ್‌ಗೆ ಹಲ್‌ಸ್‌ನ ಮರಂದ ಮಾಡ್‌ದ ಕಟ್ಟಳೆ ಬಾಗ್‌ಲ್ ಬಾರಿ ವಳ್ಳದ್‌ಂತ ಓರಿಯವು ಹೇಳ್‌ವೆ.

ಇನ್ನ್ ಹೋಮ ಹಾಕಕನ ಇದರ ಸೌದೆ ಇಲ್ಲದೆ ಆದೇ ಇಲ್ಲೆ. ಅದರ ಕೊಡಿ(ಚಿಗ್‌ರ್)ನ ಸಹ ಹಾಕುವೆ. ಮತ್ತೆ ಮದ್ವೆಲಿ ಅಂತು ಬಾರಿ ವಿಶೇಷ ಪಡ್ದ್‌ಟ್ಟು. ಮನೆ ಮುಂದೆ ಮದ್ವೆ ಚಪ್ಪರ ಹಾಕ್‌ಕಾಕನ ಹೈದನ ಮದ್ವೆ ಆದರೆ ಸೊಪ್ಪುನ ಕೊಡಿನ ಮನೆಕಡೆಗೆ ಮಾಡಿ, ಗೂಡೆನ ಮದ್ವೆ ಆದರೆ ಸೊಪ್ಪುನ ಕೊಡಿನ ಮೂಡಕ್ಕೆ ಮಾಡಿ ಹಾಕುದು ನಮ್ಮ ಗೌಡ ಸಂಪ್ರದಾಯ ಆಗುಟ್ಟು. ಅಲ್ಲದೆ, ಪೂಜೆಗಳ್ಲಿ, ದೇವಸ್ಥಾನಲಿ ಸನ ಉಪಯೋಗ್‌ಸ್ವೆ.

ಮದ್‌ವೇಲಿ ಗೂಡೆ ಇಲ್ಲರೆ ಹೈದ ಎಣ್ಣೆ ಅರಿಶಿನ ಶಾಸ್ತ್ರ ಮಾಡಿ ಮಿದ್ ಬಂದ್ ಶೃಂಗಾರ ಮಾಡಿ ಆದಂಗೆ ಸೂರುಗೆ ಮಾಡ್‌ದೇ ಹಲಸ್‌ನ ಮರಕ್ಕೆ ಪೂಜೆ. ಅದ್‌ಕೆ ನಾವು ಹೇಳುದು ಫಲದ ಪೂಜೆಂತ–ಯಾಕೆ ಈ ಮರಕ್ಕೆ ಪೂಜೆ ಮಾಡ್ವೆಂತೇರೆ ಆ ಮರಲಿ ಎಷ್ಟು ಫಲ ಬಿಟ್ಟದೇ ಅಷ್ಟ್ ಮಕ್ಕಳ ಫಲ ಬರ್‌ಲಿತ. ಇನ್ ಹೆಣ್ಮಕ್ಕ ಹೊಲೆ ಕಂಡ್‌ರೆ ಗೂಡೆನ ಕರ್‌ಕಂಡೋಗಿ ಕೂರ್‌ಸುದೇ ಈ ಮರದಡಿಲಿ. ಹಂಗೆ ಗೂಡೆ ಹೊಲೆಕಂಡ್ ಹದ್ನಾರ್ ದಿನಲಿ ಅವಳ ಕೈಂದ ಸನ ಈ ಫಲದ ಪೂಜೆನ ಮಾಡ್‌ಸುವೆ.

ಈ ಮರದ ಹಸಿ ಸೊಪ್ಪುನ ದನಗ ಬಾರಿ ಲಾಯಿಕ ತಿಂದವೆ. ವಣ್‌ಗಿದ ಸೊಪ್ಪು (ದರ್‌ಗ್) ಹಟ್ಟಿಗೆ ಹಾಕಿರೆ ಗೊಬ್ಬರ ಆದೆ.

ಇದ್‌ರ್‌ಂದ ಬರುವ ಹಾಲ್‌ನ ತೆಗ್‌ದ್ ಸ್ವಲ್ಪ ತೆಂಗಿನ ಎಣ್ಣೆ ಮಿಶ್ರ ಮಾಡಿ ಹಿಂದೆಲ್ಲ ಮಕ್ಕ ಹಕ್ಕಿಗಳ್ನ ಹಿಡಿತ್ತಿದ್ದೊ. ಅದರ ಹಸಿ ಸೊಪ್ಪುನ ತಂದ್ ಕಷ್ಟದ ಮನೇಲಿ ಮೂರ್‌ನೇ ದಿನಕ್ಕೆ ಮಾಡುವ ಶುದ್ದಲಿ ಉಂಬಕನ ಸಕ್ಕರೆ, ಜೇನುತುಪ್ಪ ಹಾಕಿಕೆ ಜನ್ನೆಕಟ್ಟಿ ಚಮ್‌ಚದಂಗೆ ಬಳ್‌ಸ್‌ವೆ.

ಇನ್ನ್ ಅದರ್‌ಲಿ ಬುಡ್‌ವ ಸಣ್ಣ ಗುಜ್ಜೆನ ಪಲ್ಯ ಮಾಡಿವೆ. ಲಾತ್‌ಕಾಳ್ ಹಾಕಿ ಗೈಪು ಮಾಡಿವೆ. ಉಪ್ಪನ ಕಾಯಿನು ಹಾಕುವೆ. ಸಲ್‌ಪ ಬೆಳ್‌ದ ಕಾಯಿನ ತಂದ್ ತೋಳೆ ಬುಡ್‌ಸಿ ಬೇಸಿ ಅದ್‌ಕೆ ಉಪ್ಪು ಮೆಣ್‌ಸ್ ಜೀರಿಗೆ ಕಾಳ್‌ನ ಹಾಕಿ, ಕಡೆಕಲ್‌ಲಿ, ಸಣ್ಣ ಕಡಿಯೊಕು ಮತ್ತೆ ಅದರ್ನ ಬಾಳೆಲೆಗೆ ತಳ್ಳನೇ ಹೊಯ್ದ್, ಹಬೇಲಿತ್ತೇಳ್ರೆ ಒಂದು ಮಡಿಕೇಲಿ 2 ಚೊಂಬು ನೀರ್ ಹೊಯ್ದ್ ಮಡ್‌ಕೆ ಬಾಯಿಗೆ ಒಂದು ಬಟ್ಟೆ ಕಟ್ಟೋಕು. ಬಂದ ಹೊಯ್ದ ಬಾಳೇಲೆನ ಆ ಬಟ್ಟೆಮ್ಯಾಲೆ ಹಾಕಿ, ಒಂದ್ ನಿಮ್‌ಸ ಬಾವಡೆ ಮುಚ್ಚೋಕು. ಮತ್ತೆ ಅದರ್ನ ತೆಗ್ದ್ ಬಿಸ್‌ಲಿಗೆ ವಣ್‌ಗ್‌ಸೋಕು. ಈಗ ಹಪ್ಪಳ ರೆಡಿ ಆತ್. ಎಣ್ಣೆಲಿ ಹೊರಿಯಕ್ ಅಥವಾ

ಬೆಂಕಿಕೆಂಡದ ಮ್ಯಾಲೆ ಹಾಕಿ ಸುಟ್ಟ್ ತಿನ್ನಕ್. ಊಟಕೆ ಒಂದೊಂದು ಇದ್ದರೆ ಬಾರಿ ಲಾಯಿಕ ಇದ್ದದೆ.

ಇನ್ ಹಲ್‌ಸ್‌ನ ಹಣ್‌ಂತ್ತೇಳಿರೆ ಎಲ್ಲವರ ಬಾಯಿಲಿ ನೀರ್ ಬಂದದೆ. ಬೊಳ್‌ವ (ಕೂಳೆ) ಹಣ್ಣಾದರೆ ತಂದ್ ತೊಳೆ ತೆಗ್‌ದ್ ಅಕ್ಕಿ ವಂಚ್‌ವ ವನಾಲೇಲಿ ಗಾಳ್‌ಸಿ, ಮಾಂಬಳ ತೆಗ್‌ದ್ ಅದ್ಕೆ ಅಕ್ಕಿ ಹೊಡಿ ಹಾಕಿ ಕಜ್ಜಾಯನು ಮಾಡಕ್, ಕೂಗಲೆ ಹಿಟ್ಟ್ ಮಾಡಕ್. ದೋಸೆ, ಬಟ್ಲಿಟ್ ಮಾಡಕ್.

ಹಲ್‌ಸ್‌ನ ಹಣ್ಣ್ ಬಕ್ಕೆ ಹಣ್ಣಾದ್ರೆ ಚಾಂಡೆ ಕೊಯ್ದ್ ತೊಳೆತೆಗ್‌ದ್, ವಳಗೆಂದ ಬೀಜನ ತೆಗ್‌ದ್, ತೋಳೆನ ಸಣ್ಣ ಕೊಯ್ದ್ ಪದ್ನ್‌ಸ್‌ದ ಅಕ್ಕಿನೊಟ್ಟಿಗೆ ಕಡ್‌ಕಲ್‌ಗೆ ಹಾಕಿ ಕಡ್‌ದ್, ಅಕ್ಕಿ, ತೊಳೆ ಸಣ್ಣ ಆದಂಗೆ ತೆಗ್‌ದ್ ಅದಕ್ಕೆ ಸ್ವಲ್ಪ ಕಾಯಿ ಹೋಳ್‌ನ ಕೊಯ್ದಿ ಹಾಕಿ ಸ್ವಲ್ಪ ಎಳ್ಳ್‌ನ ತೊಳ್ದ್‌ಹಾಕಿ ಕೂಗಲೆಹಿಟ್ಟ್, ಬಟ್ಲ್‌ಹಿಟ್, ದೋಸೆ ಕಜ್ಜಾಯನ ಮಾಡಿರೆ ತಿಂಬಕೆ ಬಾರಿ ಲಾಯಿಕ ಇದ್ದದೆ.

ಹಲ್‌ಸ್‌ನ ತೋಳೆ ನಮಿಗಾದರೆ ಅದರ ಸಾರೆ ಗೂಂಜು ಎಲ್ಲಾ ದನ ಹಂದಿಗಳಿಗೆ ಮೇವಾದೆ.

ಹಲ್ಸ್‌ನ ಬೀಜನ ಬೇಸಿ ಸಣ್ಣ ಮೆಣ್‌ಸ್ ಹಾಕಿ ನಿಂಬುಳಿ ಹಿಂಡಿ ಪೊಜ್ಜಿ ಕಡ್‌ದ್ ಅಗ್‌ರಣೆ ಹಾಕಿ ತಿಂದರೆ ನಾಕ್‌ರೊಟ್ಟಿ ತಿಂಬಂವ ಎಂಟ್ ರೊಟ್ಟಿನು ತಿಂದದೆ–ಹಂಗೆ ಸೊಂತೆ ಕಾಯಿನೊಟ್ಟಿಗೆ ನಾಕ್ ಹಲ್‌ಸ್‌ನ ಬಿತ್ತ್ ಹಾಕಿ ಗೈಪು ಮಾಡ್‌ರೇ ಬಾರೀ ರುಚಿ ಇದ್ದದೆ. ಇಷ್ಟೇ ಅಲ್ಲ, ಬೀಜನ ಬೇಸಿ ಕಡೆಕಲ್ಲಿಗೆ ಹಾಕಿ ನಾಕ್ ಸುತ್ತ್ ತಿರ್‌ಗ್‌ಸೋಕು. ಮತ್ತೆ ಅದ್‌ಕೆ ಹಸಿಮೆಣಸ್, ನೀರುಳ್ಳಿನ ಕೊಯ್ದ್ ಹಾಕಿ ರುಚಿಗೆ ತಕ್ಕ ಉಪ್ಪು ಹಾಕಿ ಕಲ್‌ಸಿ ಪೊಕ್ಕೊಡನೂ ಮಾಡ್‌ವೆ.

ಕೆಂಪು ಮಣ್ಣ್‌ತಿಕ್ಕಿ ವಣ್‌ಗ್‌ಸಿರೆ ಬೀಜನ ಹೊರ್ದ್, ಗೋಣಿ ಚೀಲಕೆ ಹಾಕಿ ಬಡ್‌ದ್, ತೊಪ್ಪೆನ ತೆಗ್‌ದ್ ಕಾಳ್‌ನ ಕಡ್‌ಕಲ್‌ಗೆ ಹಾಕಿ, ಬೆಲ್ಲ ಹಾಕಿ ಒಣ್‌ಕೇ ತಕಂಡ್ ಕುಟ್ಟೋಕು. ಸಣ್ಣ ಆಕನ ನಮ್‌ಗೆ ಬೇಕಷ್ಟು ದಪ್ಪದ ಮುದ್ದೆ ಕಟ್ಟೋಕು, ಅದ್‌ಕೆ ಬೆಣ್ಣೆ ಇಲ್ಲರೆ ತುಪ್ಪ ಹಾಕಂಡ್ ತಿಂದರೆ ತಿಂದಷ್ಟು ಸಾಲ್‌ದ್.

ಗದ್ದೆಗೆ ಬೀಜ ಹಾಕಿಕೆ ಮುಂದೆ ಹಲ್‌ಸ್‌ನ ಬಿತ್ತ್‌ನ ವಲೆಗೆ ಹಾಕಿ ಸುಡಿಕಾಗದ್‌ತ ನಮ್ಮ ಹಿರಿಯವು ಹೇಳ್‌ವೇ, ನಾಟಿ ಕೆಲ್‌ಸಲಿ ಗದ್ದೆಗೆ ಗಣೋದಿಗೆ ಮಡ್‌ಗ್‌ಕಾಕನ ಮುಂದೆ ಬೇಕಾದ್ ಹೊರ್‌ದ ಹಲ್‌ಸ್‌ನ ಬೀಜ.

ಹಿಂಗಾಗಿ ಹಲ್‌ಸ್‌ನ ಮರನ ತೆಂಗ್‌ನ ಮರದಂಗೆ ಒಂದು ಕಲ್ಪ ವೃಕ್ಷಂತ್ತೇಳ್ರೆ ತಪ್ಪಾಕಿಲ್ಲೆ.

✍ಕಡ್ಯದ ಪಾರ್ವತಿ ಕೃಷ್ಣಪ್ಪ

**ಅವಂದೂರು ಗ್ರಾಮ,**
**ಮಡಿಕೇರಿ ತಾಲೂಕು,**
**ಕೊಡಗು ಜಿಲ್ಲೆ.**

# ಗಂಧದ ಮರ

ಗಂಧದ ಮರದ ತುಂಡುನ ಅರ್ದರೆ ಗಮ ಗಮ ಸುವಾಸನೆ ಬಂದದೆ. ಗಂಧದ ಬೊಟ್ಟು ಎಲ್ಲವುಕು ಇಷ್ಟ. ನಾವು ಯಾವ ದೇವಸ್ಥಾನಕ್ಕೆ ಹೋದರು ನಾವು ದೇವರಿಗೆ ಭಂಡಾರ ಹಾಕಿದಂಗೆ ಅರ್ಚಕ ಕೊಡುದು ಪುಣ್ಯನೀರ್, ಗಂಧದ ಬೊಟ್ಟು. ಹಸುಕೂಸುನ ಮೀಸಿ ಒಲೆ ಹತ್ತರ ಕುದ್ದುಕಂಡ್ ಉಪ್ಪುಕಲ್ಲ್, ಸಾಸುವೆ ಕಾಳ್, ಒಂದು ಅರ್ಧ ಒಣ್ಗಿಲ್ ಮೆಣಸ್ ಕೂಸುನ ತಲೆ ಸುತ್ತ್‌ತಂದ್ ದೃಷ್ಟಿ ತೆಗ್ದವೆ. ನಾಯಿ ಕಣ್ಣ್, ನರಿಕಣ್ಣ್, ಪೀಡೆಕಣ್ಣ್ ಪಿಸಾಸಿಕಣ್ಣ್ ಎಂತಾರ್ ದೃಷ್ಟಿ ಇದ್ದರೆ ಹೋಗಲಿತ್ತ ಹೇಳಿ ಬೆಂಕಿ ಒಲೆಗೆ ಹಾಕುವೆ. ಉಪ್ಪುಕಲ್ಲ್, ಸಾಸುವೆ ಚಟಪಟಟತ ಹೊಟ್ಟುವೆ. ಒಣಗಿದ ಮೆಣಸು ಕರಿಯಾಗಿ ಕಾರಬರದಿದ್ದರೆ ಕೂಸುಗೆ ದೃಷ್ಟಿ ಆಗುಟುತ್ತ ಹೇಳಕ್. ಹತ್ ವರ್ಷದ ಒಳಗಿನ ಮಕ್ಕಳಿಗೆ ಸಹ ಮಾಡಿನೋಡಿ
ದೃಷ್ಟಿ ಆಗುಟುತ್ತ ಹೇಳಕ್. ಹತ್ ವರ್ಷದ ಒಳಗಿನ ಮಕ್ಕಳಿಗೆ ಸಹ ಮಾಡಿನೋಡಿ
ದೃಷ್ಟಿ ಆಗಿದ್ದರೆ ಮೆಣಸಿನ ಕಾರ ಬಾದುಲೆ. ಯಾರಿಗಾರ್ ಮೈಲ್ಲಿ ಗುಳ್ಳೆನಂಗೆ ದಪ್ಪ ಬಂದರೆ ಚಾಣೆ ಕಲ್ಲ್‌ಲಿ ನಿಂಬೆ ಹಣ್ಣ್‌ನ ರಸ ಹಿಂಡಿ ಗಂಧದ ಕೊರಡ್‌ನ ಸಮ್‌ದ್ ಸ್ವಲ್ಪ ಹಸಿ ಅರಿಸಣ ಸಮ್‌ದ್ ಮಿಶ್ರಮಾಡಿ ದಪ್ಪ ಬಂದರ ಸುತ್ತು ಹಾಕಿವೆ. ಗಂಧ ಒಣಗಿದಂಗೆ ದಿನಕೆ ಎರಡು ಮೂರು ಸತಿ ಗಂಧ ಅರಿಸಿಣ ಸಮ್‌ದ್ ಹಾಕಿ ಗುಳ್ಳೆನಂಗೆ ಬಂದದ್ ಮಾಯ ಆದೆ. ಯುಗಾದಿ ಹಬ್ಬಲಿ ಪ್ರತಿ ಒಬ್ಬ ಮನೆಲಿ ಗಂಧದ ಬೊಟ್ಟು ಬೇವು ಬೆಲ್ಲ ಇದ್ದೇ ಇದ್ದದೆ. ಯಾರಿಗಾರ್ ಕಾರಿಕೆ ಜೋರಾದರೆ ನಿಂಬೆ ಹಣ್ಣ್‌ನ ರಸಲಿ ಗಂಧನ ಸಮ್‌ದ್ ಕುಡ್ಡರೆ ಕಾರುದು ನಿತ್ತದೆ.

ಹೈದನ ಮದುವೆ ಆಗಲಿ ಗೂಡೆನ ಮದುವೆ ಆಗಲಿ ಹೆಣ್ಣ್ ಜನ ಅರಿಸಣ ಎಣ್ಣೆ ಶಾಸ್ತ್ರ ಮಾಡುವೆ. ಶಾಸ್ತ್ರ ಆದಮೇಲೆ ಮೀಯಕೆ ಕರಕಂಡ್ ಹೋದವೆ. ಮೀದ್ ಬಂದ್ ತೆಂಗಿನ ಮರ ಬುಡಲಿ ಚಾಪೆ ಹಾಕಿ ಅದರ ಮೇಲೆ ಬಿಳಿ ಬಟ್ಟೆ ಹಾಕಿ, ಗಣಪತಿಗೆ ಎರಡು ಕೊಡಿ ಬಾಳೆಲೆ ಇಸಿ ಬಾಳೆಲೆ ಮೇಲೆ ಒಂದು ಸೇರ್ ಅಕ್ಕಿ ಒಂದು ತೆಂಗಿನಕಾಯಿ ಒಂದು ಅಚ್ಚುಬೆಲ್ಲ, ಐದು ವಿಳ್ಯದೆಲೆ, ಒಂದು ಹಣ್ಣ್ ಅಡಿಕೆ ಇಸೊಕು. ಹನ್ನೊಂದು ರೂಪಾಯಿ, ಒಂದು ಮಣ್ಣ್‌ನ ದೀಪ ಹೋಸಿ ಗಣಪತಿಗೆ ಇಸೊಕು. ಅಂಗೈ ಅಗಲದ ಬಾಳೆಲೆ ತಕಂಡ್ ಶಿವನಾಮದ ಮೂರು ತೂತ ಮಾಡಿ ಮದುವಳಿಗೆಯ ಹಣೆಗೆ ಗಂಧದ ಬೊಟ್ಟು

ಹಾಕುವೆ. ಚಾಪೆಮೇಲೆ ಐದು ಕೊಡಿ ಬಾಳಲೆ ಹಾಸಿವೆ. ಬಾಳಲೆ ಮೇಲೆ ಐದ್ ಬಾಳೆ ಹಣ್ಣ್‌ನ ತುದಿನ ಸುಲ್‌ದ್ ಇಸಿವೆ. ನೆಣೆ ಬತ್ತಿ ಹೊತ್ತಿಸಿ ಇಸೊಕು. ಗಂಗೆ ಪೂಜೆಗೆ ಮದುವಳಿಗೆ ಕೈಲಿ ತೆಂಗಿನ ಕಾಯಿ ಒಡ್ಸುವೆ. ಸ್ವಲ್ಪ ಅಕ್ಕಿ ಎಳ್ಳು ಕಡ್ಲೆ ಬಾಳೆ ಹಣ್ಣ್ ಕೊಯ್ದಿ ಹಾಕಿ ನೆನಕ್ಕಿ ಮಾಡುವೆ. ಹುರುಕುಲು ಹಾಕುವೆ. ಇದರನೆಲ್ಲ ಮಿಶ್ರಮಾಡಿ ಮದುವಳಿಗೆ ಕೈಲಿ ಬಾಳಲೆ ಮೇಲೆ ಮೂರು ಮೂರು ಸತಿ ಕೈ ಜೋಡಿಸಿಕಂಡ್ ಇಕ್ಕುಸುವೆ. ಮತ್ತೆ ಊದುಬತ್ತಿಲಿ ಮದುಳಿಗೆ ಎಡೆ ಹಾಕಿದಕೆ ಹೊಗೆ ಕೊಡಕು. ಗಂಗೆ ಪೂಜೆ ಆತ್. ಅಲ್ಲಿ ಎಡೆ ಹಾಕಿದ ನೆನಕ್ಕಿನ ಗಂಡು ಕೂಸುಗೆ ಒಂದು ಎಡೆ, ಹೆಣ್ಣ್ ಕೂಸುಗೆ ಒಂದು ಎಡೆನ ಮದುಳಿಗೆ ಎತ್ತಿಕೊಡಕು. ಅಲ್ಲಿ ಸೇರ್‌ದ ಜನಕೆ ನೆನಕ್ಕಿ ಕೊಟ್ಟವೆ. ಒಂದು ಎಡೆನ ಮದುಳಿಗೆ ಕೊಟ್ಟವೆ. ಗಣಪತಿಗೆ ಇಸಿದ ಅಕ್ಕಿ ತೆಂಗಿನಕಾಯಿ ಮಡಿವಾಳ ತಕಂದೆ.

ಹರಿಸೇವೆ ಮಾಡಿಕನ ಎಂಟ್ ದಿನಕೆ ಮುಂದೆ ಬಾಳೆ ಗೊನೆ ಕಡ್ದ್ ಮುಡ್ಪು ಇರುವ ಐನ್ ಮನೆಲ್ಲಿ ಎರಡು ಗೊನೆ ಕೌವುಕೊಲಿಗೆ ಹಗ್ಗಲಿ ಕಟ್ಟುವೆ. ಗೊನೆಗಳಿಗೆ ಗಂಧದ ಹೊಗೆ ಕೊಡಿಕೆ ಒಬ್ಬ ಪೂಜಾರಿನ ಮಾಡಿದ್ದವೆ. ಪೂಜಾರಿ ಬೆಳಿಗ್ಗೆ ಸಾಯಂಕಾಲ ಎರಡು ಹೊತ್ತು ಮೀದ್ ಗಂಧದ ಹೊಗೆ ಬಾಳೆರಟ್ಟೆನ್ ಕೈನಂಗೆ ಮಾಡಿ ಅದಕೆ ಒಲೆಯಿಂದ ಕೆಂಡ ಹಾಕಿ ಗಂಧದ ಹೊಡಿ ಹಾಕಿ ಬಾಳೆಗೊನೆಗೆ ಎಂಟ್ ದಿನ ಹೊಗೆ ಕೊಟ್ಟ್ ಹರಿಸೇವೆ ಮಾಡುವೆ.

ಹಿಂದೆನ ಕಾಲಲ್ಲಿ ಪ್ರತಿ ಒಬ್ಬರ ಮನೆಲ್ಲಿ ಗಂಧದ ಕೊರಡು ಕೆತ್ತಿ ಸಣ್ಣ ಹೊಡಿಮಾಡಿ ಡಬ್ಬಲಿ ತುಂಬಿ ಇಡುತ್ತಿದೊ. ಬೆಳಿಗ್ಗೆ ಸಾಯಂಕಾಲ ದೇವರು ದೀಪಕೆ, ದೇವರು ಪಟಕೆ ಮಣ್ಣಿನ ಅಗಸ್ಟಿಕೆಗೆ ಕೆಂಡಹಾಕಿ ಅದಕೆ ಗಂಧದ ಹೊಡಿ ಹಾಕ್‌ಕನ ಗಮಗಮತ ಮನೆ ತುಂಬಾ ಬಾತಿತ್. ಈಗ ಎಲ್ಲಿ ನೊಡ್ದ್‌ರು ಊದು ಕಡ್ಡಿ ಹೊಗೆ. ಕರುಪುರ ಸಬ್ರಾಂಣಿ ಹೊಗೆ. ನಾವು ಸತ್ಯನಾರಾಯಣ ಪೂಜೆ ಮಾಡ್ಸಲಿ ಯಾವ ದೇವರ ಪೂಜೆ ಮಾಡಿಸಿರೂ ಊದು ಬತ್ತಿ ಹೊಗೆ, ಸಾಂಬ್ರಾಣಿ ಹೊಗೆನೆ ಹಾಕುದು ಮಾಡಿವೆ.

✍ಕಾಳೆಯಂಡ ತಂಗಮ್ಮ ಅಪ್ಪಚ್ಚ

ಬಿಳಿಗೇರಿ ಗ್ರಾಮ
ಮಡಿಕೇರಿ ತಾಲೂಕು
ಕೊಡಗು ಜಿಲ್ಲೆ.

(ಅನುಭವ)

# ನನ್ನ ನಾಯಿ ಕಾಣೆ ಆತ್

ಇದೊಂದು ನಿಜವಾಗಿ ನಡ್ದ ಘಟನೆನ ಓದುಗರ ಮುಂದೆ ಹಂಚಿಕಂಬಕೆ ಬಯಸಿನೆ.

ಆರು ವರ್ಷಗಳ ಹಿಂದೆ ನನ್ನ ಬ್ಯಾಂಕ್‌ನ ದೀರ್ಘಾವಧಿಯ ಸೇವೆನ ಕಡೇ ವರ್ಷಗಳ್ಲಿ ನಂಗೆ ಬೈಲುಕುಪ್ಪೆ/ಕೊಪ್ಪಲಿ ಕೆಲಸ ಮಾಡುವ ಅವಕಾಶ ಸಿಕ್ತ್. ಮಗಳ ವಿದ್ಯಾಭ್ಯಾಸಕ್ಕೆ ಅನುಕೂಲ ಆಗುವ ದೃಷ್ಟಿಂದ ನನ್ನ ಹೆಣ್ಣ್ ಮತ್ತೆ ಮಗಳ ಊರುಲೇ ಬುಟ್ಟು ನಾ ಒಬ್ಬನೇ ಅಲ್ಲಿ ಇದ್ದ್ ಕೈ ಸುಟ್ಟುಕಂಡು ಸ್ವಂತ ಅಡುಗೆ ಮಾಡಿ ತರತರ ತಿನ್ನುವ ಒಳ್ಳೆ ಅವಕಾಶ ಬಾತ್. ವಾರಕ್ಕೊ 15 ದಿನಕ್ಕೊ ಊರ್‌ಗೆ ಬಾಕನ ಮಗಳದ್ ಒಂದೇ ಒತ್ತಾಯ. ಅಪ್ಪ ಒಂದು "ಪಮೇರಿಯನ್" ನಾಯಿಮರಿ ತಕಂಡ್ ಬಾ. ನಾವು ಸಾಕುವೆ. ನೀ ಹೆಂಗೂ ಇಲ್ಲಿ ಇರುದುಲ್ಲೆ. ನಾಯಿ ಮನೆಲಿ ಇದ್ದರೆ ನಾವುಗೆ ಧೈರ್ಯಂತ ಹೇಳ್ತ್.

ಮಗಳ ಒತ್ತಾಯಕ್ಕೆ ಕಟ್ಟು ಬಿದ್ದ್ ಅಂತೂ ಇಂತೂ ನಾಯಿಮರಿನ ಹುಡುಕಿಕೊಂಡು ಹೋದೆ. ಒಬ್ಬ ಟಿಬೇಟಿಯನ್‌ನ ಮನೇಲಿ ತುಂಬಾ ಕೂದಲು ಇದ್ದ "ಪಮೇರಿಯನ್" ನಾಯಿ ನಾಲ್ಕು ಮರಿ ಹಾಕಿತ್ತ್. ಅದರ್ಲಿ ಹುಡುಕಿ ಒಂದ್ ಗಂಡ್ ನಾಯಿಮರಿನ ಅವ ಹೇಳ್ದ ದುಡ್ಡು ಕೊಟ್ಟು ತಂದೆ. ದುಡ್ಡುನ ವಿಷಯಲಿ ಅವ ರೇಟ್ ಜಾಸ್ತಿ ಹೇಳಿ ಟೊಪ್ಪಿ ಹಾಕಿಟೂಂತ ಆ ಮೇಲೆ ನಂಗೆ ಗೊತ್ತಾತ್. ನಾಯಿಮರಿ ಬಹಳ ಮುದ್ದಾಗಿತ್ತ್. ಮಗಳು ಅದ್ಕೆ "ಬ್ರೂನೋ"ತ ನಾಮಕರಣ ಮಾಡ್ತ್. ನಾ ಮಗಳೇ "ಬ್ರೂನೋ"ಂತ ಹೇಳ್ರೆ ಅರ್ಥ ಎಂತದೂಂತ ಕೇಳ್ದೆ. ಆಗ ಅವಳು ತಮಾಷೆಲಿ ಹೇಳ್. "ಬ್ರೊ"ಂತ ಹೇಳ್ರೆ ಕಾಫಿ ಹುಡಿ "ನೋ"ಂತ ಹೇಳ್ರೆ ಇಲ್ಲೆಂತ. ಆದ ಕಾರಣ ಇನ್ನ್ ಮುಂದೆ ನಿಂಗೆ ಮನೆಲಿ ಕಾಫಿ ಇಲ್ಲೆಂತ. ಏಕೇಂತ ಹೇಳ್ರೆ ನಾನಂತೋ "ಕಾಫಿ ಪ್ರಿಯ". ನಾ ಮನೆಗೆ ಪ್ರತೀ ಸತಿ ಫೋನ್ ಮಾಡಿಕನ ನಾಯಿಮರಿ ಹೇಂಗೆ ಉಟ್ಟೂಂತ ಮಗಳೊಟ್ಟಿಗೆ ಕೇಳ್ದು. ಅದಕ್ಕೆ ಅವಳು ನಾಯಿಮರಿನ ಮೋರೆ ನೋಡಿಕನ ನಿನ್ನ ಮೋರೆ ನೋಡ್ದ ಹಾಂಗೆ ಆದೆ ಅಪ್ಪಾಂತ ಹೇಳ್ದು!

ನಾಯಿಮರಿ ದೊಡ್ಡದಾಕಂಡ್ ಬಾತು. ಆಗಳೇ ನಂಗೆ ಗೊತ್ತಾದ್. ಇದು ಪಕ್ಕಾ "ಪಮೇರಿಯನ್" ಮರಿ ಅಲ್ಲ. "ಪಮೇರಿಯನ್"ಗೆ ಬೇರೆ ನಾಯಿ ಕ್ರಾಸ್ ಆಗುಟೂತ. ಇಲ್ಲಿ ಸಹಾ ಅವ ನಂಗೆ ಟೋಪಿ ಹಾಕ್ತ್. ಏನೇ ಆಗಲಿ ಮನೆ ಗೇಟ್‌ನ ಎದುರು ಯಾರೇ ಅಪರಿಚಿತರು ಬರಲಿ "ಬೌ ಬೌ" ಅಂತ ಗಲಾಟೆ ಮಾಡಿ ನಮ್ಮ ಎಚ್ಚರುಸ್ತಿತ್. ನಾಯಿ ನೋಡಿಕೆ ಲ್ಯಾಕು ಮತ್ತು ಚುರುಕು ಇತ್ತ್.

ನಂಗೆ ಬ್ಯಾಂಕ್‌ನ ಕೆಲಸಂದ ನಿವೃತ್ತಿ ಆದ ಮೇಲೆ ಸಂಜೆ 5.30 ಗಂಟೆಗೆ ನಾಯಿ "ವಾಕಿಂಗ್" ಕರ್ಕೊಂಡು ಹೋಕೆ ನನ್ನ ಪ್ಯಾಂಟ್ ಇಲ್ಲರೆ ಕಂಬ್ಯಾನ ಕಚ್ಚಿ ಎಳ್ದು ಗಲಾಟೆ ಮಾಡ್ದು. ಇದರಿಂದಾಗಿ ಈಗ ಇದ್ ನನ್ನ ಮಾಮೂಲು ಕೆಲ್ಸ ನಾಯಿನ ಜತೆ "ವಾಕಿಂಗ್" ಹೋದು.

7 ತಿಂಗಳ ಹಿಂದೆ ಮಗಳಿಗೆ ಮದ್ವೆ ಆತ್. ಅಳಿಯ ಮಗಳು ಅವರ ಕೆಲ್ಸದ ಮೇಲೆ ಬೆಂಗಳೂರಿಗೆ ಹೋದೊ. ನಮ್ಮ ಮನೆಗೆ ತಾಂಗಿಕಂಡ್ ನಮ್ಮದೇ ಒಂದು ಸಣ್ಣ ಮನೆ ಬಾಡಿಗೆಗೆ ಉಟ್ಟು. ಅದರ್ಲಿ ಬಾಡಿಗೆಗೆ ಗಂಡ-ಹೆಣ್ಣ್ 2 ಸಣ್ಣ ಮಕ್ಕಳೊಟ್ಟಿಗೆ ಒಳೊ. ಒಳ್ಳೆ ಜನ. ಅವರ ಪಾಡಿಗೆ ಅವು ಇರ್ತಿದ್ದೊ. ಮಗಳ ಮದುವೆ ಆದ ಮೇಲೆ ನಾ ಮತ್ತೆ ನನ್ನ ಹೆಣ್ಣ್ ಮನ್ಸಾಕನ ಇಲ್ಲರೆ ಮಗಳು ಕರ್‍ಯಕನ ಮಗಳ ಮನೆಗೆ ಬೆಂಗಳೂರಿಗೆ ಹೋಗಿ ಸ್ವಲ್ಪ ದಿನ ಇದ್ದು ಬರ್ತಿದ್ದೊ. ನಮ್ಮ ಬಾಡಿಗೆ ಮನೆವು ನಮ್ಮ ನಾಯಿಗೆ ಅನ್ನ, ಹಾಲು ಹಾಕಿ ಅದರ ಲ್ಯಾಕ್‌ಲಿ ನೋಡಿಕಣ್‌ತಿದ್ದೊ. ನಾಯಿಯಂತೂ ಅವರ ಮಕ್ಕಳೊಟ್ಟಿಗೆ ಹೊಂದಿಕಂಡು ಇತ್ತ್. ನಮ್ಮ ನಾಯಿನ ನಮ್ಮ ಕಾಂಪೌಂಡ್ ಬುಟ್ಟು ಹೊರಗೆ ಬುಡ್‌ತ್ತಿಲ್ಲೆ. ಒಮ್ಮೊಮ್ಮೆ ಎಲ್ಲಿಯಾರು ಗೇಟ್ ತೆರ್‌ದ್ ಬುಟ್ರೆ ಹೊರಗೆ ಓಡಿ ಪುನಃ ಮನೆಗೆ ಬರ್‌ತಿತ್.

ಕಳ್ದ ತಿಂಗ ನಾವು ಮಗಳ ಮನೆಗೆ ಸ್ವಲ್ಪ ದಿನದ ಮಟ್ಟಿಗೆ ಹೋದೊ. ಬಾಡಿಗೆ ಮನೆಯವರೊಟ್ಟಿಗೆ ನಾಯಿನ ಹೊರಗೆ ಹೋಗದ ಹಾಂಗೆ ನೋಡಿಕಣೀಂತ ಹೇಳ್ದೊ.

ಸ್ವಲ್ಪ ದಿನ ಕಳ್ದು ಪುನಃ ಮನೆಗೆ ಸಂಜೆ ಬಂದು ರಿಕ್ಷಾಲಿ ಇಳಿಯಕನ ನಾಯಿ ಅಂಗಳಲಿ ಕುತ್ತಿಗೆಗೆ ಸಂಕೋಲೆ ಹಾಕಿಕೊಂಡು ಉಟ್ಟು. ಯಾಗೋಳು ನಾವು ಎಲ್ಲಿಯಾರು ಹೊರಗೆ ಹೋಗಿ ಬಾಕನ ನನ್ನ "ಬ್ರೂನೋ" ಹಾರಿ ಬಂದು ಅದರ ಕಾಲ್‌ಲಿ ನನ್ನ ತಬ್ಬಿ ಕುಣ್ದಾಡಿ ಖುಷೀಲಿ ಬೊಗಳಿಕಂಡು ಮನೆ ಬಾಗಿಲು ತೆಗದ್ ಕೂಡಲೇ "ಸೋಫಾ"ದ ಅಡಿಗೆ ಹೋಗಿ ಮನೆಯೊಳಗೆ ತಿರ್ಗಿ ಬಾದು. ಅದ್ಕೆ ನಮ್ಮ ನೋಡ್ದ ಕೂಡ್ಲೆ ಅಷ್ಟು ಕುಶಿ ಆದು. ನಾಯಿಗೆ ನಮ್ಮ ಮನೆಯೊಳಗೆ ತಿರುಗಾಡಿಕೆ ತೊಂದ್ರೆ ಇಲ್ಲೆ.

ಆದರೆ ಈ ಸಲ ನೋಡ್ನೆ ನಾಯಿನ ಮೋರೆ ಬಾತಾಂಗೆ ಆಗುಟು. ಮೈ ಸಹಾ ಸ್ವಲ್ಪ ದಪ್ಪ ಆಗುಟು. ನಾಯಿ ಲವಲವಿಕೆಲಿ ಇಲ್ಲೆ. ಮಾಮೂಲ್ನಾಂಗೆ ಬೊಗಳ್‌ತ್ಲೆ. ಖುಷಿಲಿ ಕುಣ್ದಾಡುತ್ಲೆ. ಮೈ ಇಡೀ ಧೂಳು ಮೆತ್ತಿಕಂಡುಟು. ಮನೆ ಬಾಗಿಲು ತೆಗ್ದೆ. ಅದು ಒಳಗೆ ಬಾದ್ಲೆ.

ನನ್ನ ತಲೆಗೆ ಆಗ ಬಂದ ಯೋಚನೆ ಏನೂಂತ ಹೇಳ್ರೆ ನಾಯಿ ಎಲ್ಲೋ ಹೊರಗೆ ಹೋಗ್ಟು. ಬೇರೆ ನಾಯಿಗಳೊಟ್ಟಿಗೆ ಜಗಳ ಮಾಡಿ ಕಚ್ಚಿಸಿಕೊಂಡುಟು. ಇದಂರದಾಗಿ ಮೋರೆ ಮತ್ತು ಕೈ ಬಾತುಟೂಂತ. ಅದರೆಡೆಲಿ ನಮ್ಮೂರ್ಲಿ ಹುಚ್ಚು

ನಾಯಿಗಳ ಕಾಟ. ತಲೆಲಿ ಏನೇನೋ ಆಲೋಚನೆ. ನನ್ನ ಹೆಣ್ಣು ಸಹಾ ಹೇಳ್ತು. ನಾಯಿ ಮಾಮೂಲ್ನಾಂಗೆ ಇಲ್ಲೇಂತ. ಮನೆ ಒಳಗೆ ಹೋಗಿ ಬಟ್ಟೆ ಬದ್ಲಾಯಿಸಿ ಮೊದ್ಲು ಮಾಡ್ದ ಕೆಲ್ಸ ನೀರು ಬಿಸಿ ಮಾಡಿ ನಾಯಿ ಸಾಬೂನು "ನೋಟಿಕ್ಸ್"ಲಿ ನಾಯಿನ ಮಿಯ್ಸಿ, ಚಂಡಿ ತೆಗ್ದು, ಪೌಡರ್ ಹಾಕಿ ಹೊರಗೆ ತಂದೆ. ಮಿಯ್ಸಿಕನ ನಾಯಿನ ಕುತ್ತಿಗೆಲಿ ನಾ ಕಟ್ಟಿದ ಸಣ್ಣ ಬೆಲ್ಟ್ ಇತ್ಲೆ. ನಾಯಿನ ಮಾಮೂಲಿ ಚಟುವಟಿಕೆ ಕಾಂಬೋದೇ ಇಲ್ಲೆ. ಬಾರಿ ಹೆದರ್ದಂಗೆ ಇತ್ತ್.

ಅಷ್ಟೊತ್ತಿಗೆ ಬಾಡಿಗೆ ಮನೆಲಿ ಇದ್ದವು ಬಂದೊ. ಸರ್, ನಾ ಮೊನ್ನೆ ಊರ್‌ಂದ ರಾತ್ರಿ ಬಸ್‌ಲಿ ಬಂದೆ. ಗೇಟ್ ತೆಗ್ದು ಒಳಗೆ ಬಾಕನ ನಿಮ್ಮ ಬ್ರೂನೋ ಹೊರಗೆ ಓಡಿ ಬುಟ್ಟಿತು. ಒಂದು ದಿನ ಇಡೀ ಬಾತ್ಲೆ. ಮತ್ತೆ ನಾ ಮತ್ತು ನನ್ನ ಮಂಜ (ಸಣ್ಣ ಹೈದ) ಅದರ ಹುಡ್ಕಿ ಹುಡ್ಕಿ ಕಡೆಗೆ ಕಾಂಬಕೆ ಸಿಕ್ತ್. ಕುತ್ತಿಗೆಗೆ ಚೈನು ಹಾಕಿ ಮನೆಗೆ ತಂದೋತ ಹೇಳ್ದೊ. ನಾ ಅವ್ಕೆ "ತ್ಯಾಂಕ್ಸ್" ಹೇಳ್ದೆ.

ಅವು ಪಾಪ ನಾಯಿ ಕಾಣೆ ಆದ ಮಾರ್ನೆ ದಿನ ಜೋಯ್ಸರ ಹಕ್ಕಲೆ ಹೋಗಿ ನಾಯಿ ಕಾಣೆ ಆಗುಟು ಅದ್ ಸಿಕ್ಕಿದೆನೊ, ಇಲ್ಲೆನೋಂತ ಪ್ರಶ್ನೆ ಸಹಾ ಕೇಳ್ಸಿದೊ. ಜೋಯ್ಸರು ಅವ್ಕೆ ನಾಯಿ ಖಂಡಿತಾ ಸಿಕ್ಕಿದೇಂತ ಭರವಸೆ ಕೊಟ್ಟಿದ್ದೊ. ಅವ್ಕೆ ಕಾಣೆ ಆದ ನಾಯಿ ಸಿಕ್ಕಿತೂಂತ ಬಾರಿ ಕುಷಿ.

ಇತ್ತ ನನ್ನ ಹೆಣ್ಣ್ ನಾಯಿನ ಮಿಸಿದ ಕೂಡ್ಲೆ ಹಾಲು ಹಾಕಿತು. ನಾಯಿ ಕೂಡ್ಲೆ ಅದರ ಕುಡ್ತು, ಅಡಿಗೆ ಆದ ಮೇಲೆ ನಾಯಿಗೆ ಅನ್ನ ಹಾಲು ಕೊಟ್ಟತ್. ಅದರ ಸಹಾ ಲ್ಯಾಕು ತಿಂದತ್. ಆದರೆ ನಾಯಿ ಹೊಟ್ಟೆ ಒಳಗೆ ಕುಂಯ್, ಕುಂಯ್ ಶಬ್ದ ಹೊರಡುಸ್ದು ಅಲ್ಲದೇ ಮಾಮೂಲ್‌ನ ಬೊಗಳಾಟ ಇಲ್ಲೆ. ನಂಗೂ ನನ್ನ ಹೆಣ್ಣುಗೆ ನಾಯಿಗೆ ಏನೋ ಆಗುಟೂಂತ ಚಿಂತೆ. ಅದರ್ಲೂ ಹುಚ್ಚು ನಾಯಿದು ಹೆದ್ರಿಕೆ. ರಾತ್ರಿ ಮಲಗಿರ್ದು ನಾಯಿನ ಬಗ್ಗೆ ಇಬ್ಬರಿಗೂ ಚಿಂತೆ.

ಮನಸ್ಲಿ ಸಮಾಧಾನ ಇಲ್ಲೆ. ಬೊಳ್ಪು ಆತು. ಆ ದಿನ ಆದಿತ್ಯವಾರ ಎಲ್ಲಾ ಕಾರ್ಯಕ್ರಮ ಲೇಟ್. ಒಂಬತ್ತು ಗಂಟೆಗೆ ನಾ ನನ್ನ ಗುರ್ತ ಇದ್ದ "ವೆಟನರಿ ಸ್ಟಾಫ್"ಗೆ ಫೋನ್ ಮಾಡಿ ನಾಯಿನ ವಿಷಯ ತಿಳ್ಸಿ ಒಂದು ಸಲ ಬಂದ್ ನಾಯಿನ ನೋಡಿ ಸರ್ ಅಂತ ಹೇಳ್ದೆ ಅವು ಅದಕ್ಕೆ ಒಪ್ಪಿಕಂಡ. ಒಂಬತ್ತೂವರೆ ಗಂಟೆಗೆ ನಾ ಮೀಯಕೆ ಹೊರ್ಟಳೆ. ಅಷ್ಟೊತ್ತಿಗೆ ಬಾಡಿಗೆ ಮನೆಯವರ ನಾಲ್ಕು ವರ್ಷದ ಮಗಳು ಬಾತ್. ಅವ್ಳು ನನ್ನ ತಾತಾಂತ ಕರಿದು. ತಾತಾ ಗೇಟ್ ಎದುರು ನಮ್ಮ ಬ್ರೂನೋ ಉಟ್ಟು. ಅದರ ಕುತ್ತಿಗೇಲಿ 'ಬೆಲ್ಟ್' ಉಟ್ಟೊಂತ. ಗೇಟ್‌ನ ಎದ್ರು ನೋಡ್ನೆ ನನ್ನ ಬ್ರೂನೋ ಬಾಲ ಅಲ್ಲಾಡಿಸಿಕೊಂಡು ನಿತ್ತುಟು. ಬೇಗ ಹೋಗಿ ಗೇಟ್ ತೆಗ್ದ ಕೂಡ್ಲೆ ಓಡಿ ಬಂದು ನನ್ನ ಎದುರು ಹಾರಿ ನನ್ನ ತಬ್ಬಿ ಮನೆ ಒಳಗೆ "ಸೋಫಾ"ದ ಅಡಿಗೆ ಹೋತು. ನಂಗೆಂತೂ ಸೊಯ ತಪ್ಪಿದಾಂಗೆ ಆತ್. ನಮ್ಮಲ್ಲಿ ಆಗಲೇ ಒಂದು ನಾಯಿ ಉಟ್ಟು. ಈಗ ಬಂದ

ನನ್ನ "ಬ್ರೂನೋ"? ಎರಡರ ಒಟ್ಟಿಗೆ ನೋಡಕನ ಅಣ್ಣ ತಮ್ಮಂದಿರ ಹಾಂಗೆ ಕಾಣ್ತಿತ್ತ್. 'ಬ್ರೂನೊ' ಸ್ವಲ್ಪ ಸಪೂರ ಇನ್ನೊಂದ್ ಇದರ್‌ಂದ ದಪ್ಪ "ಬ್ರೂನೋ" ಸಹ ಧೂಳು, ಮಣ್ಣು ಮೆತ್ತಿಕಂಡು ಇತ್ತು. ಕುತ್ತಿಗೆಲಿ ನಾ ಕಟ್ಟಿದ ಬೆಲ್ಟ್ ಉಟ್ಟು. ಮನೇಲಿ ಇದ್ದ ನಾಯಿನ ಸಂಕೋಲೆ ಬಿಚ್ಚಿ ಗೇಟ್ ತೆಗ್ದೆ. ಆ ನಾಯಿ "ಪುಡ್ಚೊ" (ಓಡಿ ಬುಟ್ಟಿತು).

ಆ ಮೇಲೆ ನಂಗೆ ಸ್ನಾನಕ್ಕೆ ಇಸಿದ ನೀರ್ಲಿ "ಬ್ರೂನೋ"ನ ಲ್ಯಾಕ್ ಸ್ನಾನ ಮಾಡ್ಸಿ ಪೌಡರ್ ಹಾಕ್ದೆ. ಅಷ್ಟೊತ್ತಿಗೆ ನನ್ನ ಹೆಣ್ಣ್ ಭಾರಿ ಖುಷೀಲಿ ಹಾಲು ತಂದು ಹಾಕಿತ್. ನಾಯಿ ಕೂಡ್ಲೆ ಹಾಲು ಕುಡ್ತ್. ಸ್ವಲ್ಪ ಹೊತ್ತು ಕಳ್ದು ನೋಡ್ನೆ ನಾಯಿ ಸೋಫಾದ ಅಡಿಲಿ ಗಡ್ದ್‌ಲಿ ನಿದ್ದೆ ಮಾಡಿಟು.

ಆದ ಘಟನೆಗಳ ಎಲ್ಲಾ ಮನಸ್ಸ್‌ಲೇ ಮೆಲ್ಕು ಹಾಕಿದೆ. ನಾ ಒಬ್ಬ ಎಂತ "ಬೋದಾಳ"ಂತ ಅನ್ನಿಸಿತು. ಆರು ವರ್ಷ ಸಾಂಕಿದ ನಾಯಿನ ಗುರ್ತು ಹಿಡಿಯಕೆ ಅತ್ತೆಲ್ಲ? ಬೇರೆ ನಾಯಿನ ಹೇಂಗೆ ನಾ ಸಾಂಕಿದ ನಾಯಿಂತ ಒಪ್ಪಿಕಂಡೆ? ಹಿಂದೆನ ಜನ್ಮಲಿ ಆ ನಾಯಿ ನನ್ನ ಸೇವೆ ಏನಾರೂ ಮಾಡಿಟೋ ಏನೋ? ಸುರುಗೆ ಮನಸ್ಲಿ ಬಂದ ಸಂಶಯನ ಯಾಕೆ ಪರಿಶೀಲಿಸಿತ್ಲೆಂತ? ಈ ಘಟನೆನ ನನ್ನ ಕುಟುಂಬದವರೊಟ್ಟಿಗೆ ಹಂಚಿಕಂಡೆ. ಎಲ್ಲವೂ ನಂಗೆ ತಮಾಷೆ ಮಾಡುವವೆ. ನನ್ನ ತಮ್ಮನ ಮಂಙ "ಡೆಂಟಲ್ ಡಾಕ್ಟರ್" ಅವ ಕೇಳ್ತ್ ದೊಡಪ "ಬ್ರೂನೋ"ಂಗೆ ಎರಡು ಕೋರೆ ಹಲ್ಲು ಸ್ವಲ್ಪ ಹೊರಗೆ ಬಂದಿತ್ತಲ್ಲಾ. ಆದರೂ ನೀವು ಆ ನಾಯಿಲಿ ಉಟ್ಟೊ, ಇಲ್ಲೆನೋಂತ ನೋಡ್‌ತ್ಲೆನಾಂತ. ನಂಗೆ ಆಗ ಆತ್ ಇವ ಹಲ್ಲಿನ ಡಾಕ್ಟರ್ ಆದಕೆ ಸಾರ್ಥಕ ಆತುಂತ. ಅವಂಗೆ ಎಲ್ಲದರ್ಲಿ ಹಲ್ಲ್‌ದೇ ಚಿಂತೆ!

ಆ ಹೊಸ ನಾಯಿನ ನಾ ಮಿಾಯ್ಸಿಕನ, ಅದರ ಹಿಡಿಯಕನ, ಅದರ ಕುತ್ತಿಗೆಗೆ ಸಂಕೋಲೆ ಹಾಕಿಕನ ಯಾವ ಸಂದರ್ಭಲಿ ಸಹಾ ಗಲಾಟೆ ಮಾಡ್‌ತ್ಲೆ. ಬೊಗಳ್‌ತ್ಲೆ. ಕಚ್ಚಿಕೆ ಬಾತ್ಲೆ. ಹೇಂಗೆ ನಾ ಹೇಳ್ದಂಗೆ ಕೇಳ್‌ತ್ತಿತ್ತೂಂತ? ಆಗ ನಂಗೆ "ಸಡನ್" ತಲೆಗೆ ಹೊಳ್ತು. ಆ ನಾಯಿ ನನ್ನೊಟ್ಟಿಗೆ ಅಷ್ಟು ಲ್ಯಾಕ್‌ಲ್ ಹೊಂದಿಕಂಬಕೆ ಒಂದು ಮುಖ್ಯ ಕಾರಣ ಉಟ್ಟೂಂತ. ಏನ್‌ಂತ ಹೇಳ್ರೆ, ನಾ ಸಿಂಡಿಕೇಟ್ ಬ್ಯಾಂಕ್‌ಲಿ 35 ವರ್ಷ ಸೇವೆ ಸಲ್ಲಿಸಿದಕ್ಕೆ ಸಾರ್ಥಕ ಆತ್‌ಂತ. ಯಾಕೇಂತ ಹೇಳ್ರೆ ಸಿಂಡಿಕೇಟ್ ಬ್ಯಾಂಕ್‌ನ "ಲೋಗೊ" "Faithful Friendly" ಅದುವೇ "ನಾಯಿ".

✍ ಹೂವಯ್ಯ ಸೂಂತೋಡು

ಸೂಂತೋಡು ಮನೆ,
ಅಂಬತಡ್ಕ ಅಂಚೆ,
ಸುಳ್ಯ, ದಕ್ಷಿಣ ಕನ್ನಡ- 574239

# ಲಿಂಗಪ್ಪ ಗೌಡ್ರ್‌ಗೆ ಹಂದಿ ಏಪಿತ್‌ಗಡ !

ಲಿಂಗಪ್ಪ ಗೌಡ್ರೂಂತೇಳಿರೆ ಕಡೋಡಿ ಮನೆವು. ನಮ್ಮ ಗುತ್ತಿಗಾರ್ ಗ್ರಾಮದ ವಳ್ಳಂಬೆಗೆ ತಾಗ್ಯಂಡ್ ಎರಡ್ ಬೈಲ್‌ಗ ಒಳೊ. ಒಂದು ಬಂಟಮಲೆಂದ ಇಳ್ದ್ ಬರುವ ಕೊರುಂಗ್ ಚೋಡಿನ ಉದ್ದಕ್ಕೂ ಇರುವ ಹೊಸೊಳಿಕೆ ಮಜೆಲ್ ಬೈಲ್. ಅರೆಗ್ಗಾಲ ಇಲ್ಲಿ ನೀರ್ ಕ್‌ಮ್ಮಿ. ಹಾಂಗಾಗಿ ಮಜೆಲ್ ಬೈಲ್‌ಂತ ಕರ್‍ದೊಳೊ. ಇದ್ಕೆ ತಾಗ್ಯಂಡ್ ಕುಟ್ರುಮುಕ್ಕಿ ಚೋಡಿ ಉಟ್ಟು. ಈ ಚೋಡಿ ಕೂಡಾ ಬಂಟಮಲೆಂದ ಹರ್‍ದ್ ಬಾದು. ಈ ಚೋಡಿನ ಉದ್ದಕ್ಕೆ ಮೊಟ್ಟೆ, ಕಡೋಡಿ ಮತ್ತೆ ಕೂವೆಕೋಡಿ ಮನೆಗ. ಸುಮಾರ್ ಐವೊತ್ತು ವರ್ಸ್‌ಗಳ ಹಿಂದೆನ ಸಂಗತಿ ಇದ್. ನೊಡು ನೊಡುಲಿ ದೂರ ದೂರಕ್ಕೆ ಕೊಮ್ಮು ಚಾಳೆ ಬುಟ್ಟರೆ ಒಳ್ದ ಜಾಗೆ ಪೂರಾ ಗದ್ದೆಗಳೇ ಮಳ್ಗಾಲ ನೇಜಿ ನೆಟ್ಟ್ ಮೇಲೆ ಉದ್ದುದ್ದಕ್ಕೂ ಪಚ್ಚೆ ಪಚ್ಚೆ ಗದ್ದೆಗ. ಬೊಳ್ಳಿನಾಂಗಿರುವ ಈ ಬೈಲ್‌ಗಳ ಸುತ್ತ ಇದ್ದದೇ ಕಾಡ್‌ಗುಡ್ಡೆಗ. (ಇಂದ್ ಹಾಂಗಿಲ್ಲೆ) ಇದರ್‌ಂದ ಅತ್ತ ಬಂಟಮಲೆ ರಣಕಾಡ್. ಆ ಕಾಡೊಳಗೆ ಅಮ್ಮೊಜ್ಜಿ ಕಲ್ಲುಟ್ಟು, ಅಲ್ಲಿ ಬಂಟ ತುಂಬಿಗ ಇದ್ದೊಗಡ. ಊರ್‍ನೊವುಕ್ಕೆ ಬೇಕಾದ ಬೊಡಿಗೆ, ಬಳ್ಳಿ, ಸೊಪ್ಪು, ಸೊವುದೆ ಗದ್ದೆ ಕರೆಲಿದ್ದ ಗುಡ್ಡೆಗಳ್ಲಿ ಇರ್‍ತಿತ್. ಆ ಕಾಲಲಿ ಸೂಟೆಕ್‌ಟ್ಟಿ ಹೋಗಿ ಮೊಲ-ಬೊರ್‍ಕ್ಯ ಹೊಡ್ಯೊತಿದ್ದೊ! ಹಿಂಬೊತಾಕನ ಮುಚ್ಚಂಗ ಮನೆ ಹಿಂದೆನ ಗುಡ್ಡೆಗಳ್ಲಿ ಹೂಕ್ ಹಾಕುತ್ತಿದ್ದೊ. ಮಳ್ಗಾಲ ಕುಳ್ಗುಮೆಗ ಗದ್ದೆ ಕರೆಗೆ ಇಳ್ಯೊತಿದ್ದೊ. ಮನ್‌ಹಿಂದೆನ ನೋಕಟೆ ಮರದಡಿಂದ ಬಿಲ್ಲ್ ಕಲ್ಲ್‌ಲಿ ಕುಳ್ಗುಮೆಗಳ ಹೊಡ್ಯತಿದ್ದೊ.

ಆ ಕಾಲಲಿ ಬೈಲೊಳಗೆ ದೂರ ದೂರಕೆ ಮನೆಗ. ಈ ಪೈಕಿಲಿ ಕಡೋಡಿಲಿ ಲಿಂಗಪ್ಪ ಗೌಡ್ರ ಮನೆನೂ ಇತ್. ಒಸಿ ಕಾಗಡೆಗೆ ಮೊಟ್ಟೆ ಮನೆ, ಅದರ್‌ಂದಾಚೆ ಮೋಟ್ನೂರು, ದಂಬೆಕೋಡಿ ಮತ್ತೆ ಬೈಲ್ ತಲೆಲಿ ಹೊಸೊಳಿಕೆ ಕಟ್ಟೆಮನೆ. ಮತ್ತೆ ಪೂರಾ ಕಾಡೇ ಕಾಡ್.

ಕಡೋಡಿ ಲಿಂಗಪ್ಪ ಗೌಡ್ರಿಗೆ ಒಂದು ಚೂರು ಅಡ್ಕೆ ತೋಟನೂ, ಮತ್ತೆ ಮನೆ ಎದ್ರಿಗೆ ದೊಡ್ಡ ದೊಡ್ಡ ಗದ್ದೆಗಳೂ ಇದ್ದೊ. ಒಳ್ಳ್ ನೀರಾಶ್ರಯದ ಗದ್ದೆಗ, ಏನೋ ಕೈಯಿ ಎದ್ರುದು, ಏನೋ ಬೆಳೆ, ಏಣೆಲ್, ಸುಗ್ಗಿ ಮತ್ತೆ ಕೊಳ್ಕೆನೂ ಮಾಡ್ತಿದ್ದೊ. ಮಳೆ ಕ್‌ಮ್ಮಿಯಾಗಂಡ್ ಬಾತ್, ಗದ್ದೆಗೆಲ್ಲಾ ಕೆಂಪಾಕೆ ಸುರಾದೊ, ನೆಟ್ಟಂಗಿದ್ದ ಕೊರಳ್ ದಿನ್ನಾದಂಗೆ ಬೊಗ್ಯಂಡ್ ಬಾತ್. ದೂರ ದೂರ ಬಂಟಕಾಡ್‌ಲಿದ್ದ ಹಂದಿಗಳ ಹಿಂಡ್ ಗದ್ದೆ ಕರೆಗೆ ಬಂದೊ. ಇದ್ ಗೊತ್ತಿದ್ದೆ ಲಿಂಗಪ್ಪಣ್ಣ ಗದ್ದೆ ಪುಣಿಲಿ ಮಾಡಂಕೋಲು ಹಾಕಿ ಹಂದಿ ಪಾರಕೆ ಕುದ್ದೊ. ಏನ್ ಇನ್ನೊಂದು ವಾರಲಿ ಗದ್ದೆಕ್ಕೊಲು ಮಾಡೊಮೊಂತ ಇರ್‍ಕನ ಹಂದಿಗ

ಗದ್ದೆಗೆ ಇಳ್ದೊ. ಅವುಕ್ಕೂ ತಡ್ಯಕೇ ಆತ್ಲೆ ಕಂಡದೆ. ಲಿಂಗಪ್ಪಣ್ಣಂಗೆ ಕಣ್ಣ್ ಅಡ್ಡ ಆದ್ದರ್‌ನೇ ಹಂದಿಗ ಕಾದ್‌ಕಂಡೇ ಇದ್ದೊಕಂಡದೆ. ಬೊಳ್ಪಿಗೆ ಎದ್ದ್ ನೋಡಿರೆ ಹಂದಿಗ ಗದ್ದೆಂದ ಒಂದೊಂದೇ ಗುಡ್ಡೆಗೆ ಹತ್ತ್‌ತಾ ಒಳೊಗಡ. ಇನ್ನ್ ಬಾಯಿ ಮಾಡಿ ಸುಕ ಇಲ್ಲೆಂತೇಳ್ದೊ. ತಮ್ಮ ಗಣಪ್ಪಯ್ಯ ಗೌಡ್ರ ಕರ್ದ್ ಆಚೆಮನೆ, ಈಚೆಮನೆಗಳ ವೊಕ್ಕೆ ತಿಳ್ಸಿಕೆ ಹೇಳ್ದೊ. ಬೇಗ ಬೇಗ ಹೊಟ್ಟೆ ಗಟ್ಟಿ ಮಾಡಿಕಂಡೊ. ಹಂದಿಗ ಹಿಂಡ್‌ನವಾದ ಕಾರಣ ದೂರ ಹೋಕಿಲೆ, ಬೇಟೆ ಮಾಡೊಮೊಂತ ತೀರ್ಮಾನ ಆತ್. ಐದಾರ್ ಬೆಡಿಗಳೂ ಒಟ್ಟಾತ್, ಹೆಚ್ಚಿ ನಾಯಿಗ ಬೇಡ, ಮತ್ತೆ ಅವ್ವವ್ವೇ ಕ್‌ಚ್ಚಿಕಂಡವೆಂತೇಳಿ ಒಂದು ಮನೆಲಿದ್ದ ಮೂರು ನಾಯಿಗಳ ಕರ್ಕಂಡ್ ಗುಡ್ಡೆ ಹತ್ತಿದೊ. ಎರ್ಡ ಕಡೆಂದ ಕಾಡ್ ಹೊಡ್ಯೋದು, ಹಂದಿಗ ಒಂದೋ ಗದ್ದೆಗಿಳ್ಯೊಕು. ಅಲ್ಲಿ ಎರ್ಡ್ ಜನನ ಬಿಲ್ಲ್ ನಿಲ್ಸುದು. ಪಣೆಮೇಲೆ ನಾಲ್ಕ್ ಜನ ಬಿಲ್ಲ್ ನಿಲ್ಲುದೂಂತೇಳಿ, ಸಂದ್‌ಗಲ್ಲಿ ನಾಲ್ಕ್ ಜನ ಬಿಲ್ಲ್ ನಿಂತೊ. ಲಿಂಗಪ್ಪಣ್ಣ ಅವರ ಹಳೆ ಕೇಪುನ ಬೆಡಿನ ಹಿಡ್ಕಂಡ್ ಬಂಟಕಾಡ್ ಕರೆಗೆ ಇಳ್ಯವ ಸಂದ್‌ಲಿ ನಿಂತೋ. ಅದೊಂದು ನೆತ್ತಿ ಜಾಗೆ, ಜೆರಿವೊಳಂಗೆಂದ ಹಂದಿಗ ಬಂದರೆ ಅಲ್ಲಿಗೆ ಬರೊಕು. ಒಮ್ಮೆ ಅಲ್ಲಿಂದ ಆಚೆಪುಡೆಗೆ ಇಳ್ದರೆ ಮತ್ತೆ ಅವು ಕಾಂಬಕೆ ಸಿಕ್ಕಿಕಿಲೆ. ಅಂತಾ ಚೆಂಡೆಮುಳ್ಳುನ ಜಿಗ್ಗ್! ಆದರೆ ಪಣೆಲಿ ದನಂಗ ಹೋವ ಒಂದು ದಾರಿ ಇತ್ತ್. ಯಾಗೆಳೊ ಸೊಪ್ಪು ಹೆರ್ದ ಗುತ್ತಿಗ. ಮಡರಬೋಡಿ ದೈಗ ಸೊಂಟಂದ ಮೇಲೆ ಬೆಳ್ದ್ ನಿಂತೊಳೊ. ಬೇರೆ ಎತ್ತರದ ಬಲ್ಲೆ ಇಲ್ಲದ ಕಾರಣ ಹಂದಿ ದೂರಂದಳೇ ಬಾದು ಗೊತ್ತಾದೂಂತ ಹೇಳಿ ಲಿಂಗಪ್ಪಣ್ಣ ಹಕ್ಕಲೆ ಇದ್ದ ದೊಡ್ಡ ಮರಕ್ಕೆ ಒರ್ಗಿ ನಿಂತೊ. ಏನೋ ನೆನ್ಪಾಗಿ ಅವರ ಬೆಡಿನೊಮ್ಮೆ ನೇಚಿ ಹಿಡ್ದ್ ಪಾತಿನ ಆಚೆ ಈಚೆ ತಿರ್‌ಗ್ಸಿ ಕುಸೀಲಿ ಪೂಜಿ ನೋಡ್ದೊ. ಇಂದ್ ಈ ಬೆಡಿಲಿ ಒಂದು ಗುಂಡು ಬಿದ್ದರೆ ಹಂದಿಗ ಮತ್ತೆ ಹದ್ನೈದ್ ದಿನ ಈ ಪುಡೆಗ ಬಾಕಿಲೆ. ಅಷ್ಟರ್ಲಿ ನನ್ನ ಗದ್ದೆ ಕ್ಯೊಲ್ ಮುಗ್ಸೊಕೂಂತ್ ಮನ್ಸ್‌ನೊಳಗೆ ಗ್ರೆಸಿಕಂಡೊ. ಅವುಕ್ಕೆ ತಾ ಬಂಜ ಬಂದ್ ಬೆಳ್ಸಿದ ಗದ್ದೆನ ಹೊಡಿತೆಗ್ದ ಹಂದಿಗಳ ಬಗ್ಗೆ ಸಿಟ್ಟ್ ಕೊದ್ಕತಿತ್.

ಇಷ್ಟ್ ಹೊತ್ತಿಗೆ ಬೈಲ್ ಕರೆಂದ ಕಾಡ್ ಹೊಡ್ಯವರ ಬೊಬ್ಬೆ ಜೋರಾತ್. ಲೆಚ್ಚಿಮ ಹೈದ ಹಂದಿ ಎದ್ದತ್‌ಂತ ಹೇಳ್ದು ಲಿಂಗಪ್ಪಣ್ಣಂಗೆ ಕೇಳ್ತಾ ಉಟ್ಟು. ಒಟ್ಟಿಗೆ ನಾಯಿಗಳ ಬೊಗ್ಳಟ ಕೇಳ್ತಾ ಉಟ್ಟು. ಲಿಂಗಪ್ಪಣ್ಣ ಕುದ್ರೆ ಎಳ್ದ್ ನಿತ್ತ್‌ಕಂಡೊ. ಈ ಸುಟ್ಟ ಕೇಪು ಒಮ್ಮೊಮ್ಮೆ ಹೊಡ್ಯುದುನ್ ಇಲ್ಲೆಂತಗ್ರೇಸಿ ಪಟಾಕಿ ಅಂಟ್ಸಿದ ಇನ್ನೊಂದು ಕೇಪು ಸೊಂಟಲಿ ಉಟ್ಟೊಂತ ಮುಟ್ಟಿ ನೋಡ್ದೊ. ಅಷ್ಟೊತ್ತಾಕನ ಬಲ್ಲೆ ದೂಡಿಕಂಡ್ ಗೆಲ್ಲ್ ಮುರ್ಕಂಡ್ ಹಂದಿ ಬಾವ ಸಬ್ದ ಕೇಳ್ತ್. ಹಂದಿ

ಇತ್ತಳೇ ಬರ್ತಾ ಉಟ್ಟು. ಆದರೆ ಹಂದಿ ಕಣ್ಣ್‌ಗೆ ಕಾಂಬೊದುಲೆ, ಮಡಂಬೊಳಿ ಬಲ್ಲೆ ಆಚೆ-ಈಚೆ ಅಲ್ಲತಾ ಉಟ್ಟು. ಹಂದಿ ಕಾಣದೆ ಈ ಬಲ್ಲೆಗೆ ಹೊಡ್ಯೊದು ಹೇಂಗೆಂತ ಗ್ರೇಸಿಕಂಡೊ. ಅಷ್ಟೊತ್ತಿಗೆ ಹಂದಿನ ಬೆನ್ನೊಮ್ಮೆ ಕಂಡಾಂಗೆ ಆತ್. ಇನ್ನ್ ತಡ ಮಾಡಿರೆ ಪಣೆ ಇಳ್ದ್ ಚೆಂಡೆ ಜಿಗ್ಗ್‌ನೊಳಗೆ ಇಳ್ದದೆ. ಮತ್ತೆ ಹಿಂದೆಂದ ಹೊಡ್ಯವ ವೈವಾಟ್ ಆಕಿಲೆಂತೇಳ್ದೊ ಕಳ್ಳನ ಮೀಟಿಯೇ ಬುಟ್ಟೊ. ಅದೆಂತ ಆತೋ ಹಂದಿ ಗೊಗ್ಗೊಳ್ಸಿಕೆ ಸುರುಮಾಡ್ತ್, ಒಮ್ಮೆ ಹಂದಿ ತಲೆನೇಚಿ ನೋಡ್ದ್ ಕಂಡುಟು, ಹಂದಿ ಸೀದಾ ಬಂದದೇ ಲಿಂಗಪ್ಪಣ್ಣನ ಮೇಲೆ. ಕೇಪುನ ಬೆಡಿಗೆ ಮತ್ತೆ ಈಡ್ ತುಂಬ್ಸಿಕೆನೂ ಆತ್ಲೆ. ಸೊಂಟಲಿದ್ದ ಕತ್ತಿನ ತೆಗ್ದೊ, ಓಡಿ ತಪ್ಸಿಕಂಬ ಯೋಚನೆನೂ ಬಾತ್ಲೆ. ಗದ್ದೆ ಹಾಳ್‌ಮಾಡ್ದ ಸಿಟ್ಟು ಇನ್ನೂ ಇಳ್ತ್ ಲೆ. ಗ್ಹೊಗ್ಹೊಗ್ಹೊಂತ ಗೊಗ್ಗೊಳ್ಸಿಕಂಡ್ ಬಂದದ್ ದಡ್ಡೆ ಹಂದಿಂತಾ ಲಿಂಗಪ್ಪಣ್ಣಂಗೆ ಗೊತ್ತಾಕನ ಅದ್ ಅವರ ಮೈಮೇಲೆನೇ ಬಾತ್. ಎಲ್ಲಿಗೆ ಕ್‌ಡ್ಯೊದೂಂತ ಯೋಚನೆ ಮಾಡ್ಕನ ಹಂದಿ ಇವರ ಮೇಲೆ ಹಾರ್ತ್. ಕತ್ತಿನ ಬೀಸಿದ ರಬಸಕ್ಕೆ ಅದ್ ಹಂದಿಗೆ ತಾಂಗಿತ್‌ಲೆ, ಕೈಲಿದ್ದ ಕತ್ತಿ ರಟ್ಟಿಯ್ಯೇ ಹೋತ್, ಹಂದಿಗೆ ಯೇಪಿಗೆ ಸಿಕ್ಕದಿದ್ದರೂ, ತಿರ್‍ಗಿಬಂದ ಹಂದಿಗೆ ಇವರ ಬಲ್ದ ಕೈ ಸಿಕ್ಕಿತ್. ಬಾಯಿಬುಟ್ಟ್‌ಕಂಡೇ ಬಂದ ಹಂದಿ ಇವರ ಕೈನ ಮುಂಗೈವರೆಗೂ ನುಂಗಿತ್. ಹಂದಿಗ ಸಾಮಾನ್ಯವಾಗಿ ಮೊನ್ಸ್ಯನ ತೊಡೆ ಬುಡಕ್ಕೆ ಯೇಪುದು, ಗೋರೆ ಇರುವ ಹಂದಿಗ ಮನ್ಸ್‌ನ ತೊಡೆನಳೇ ಸಿಗ್ದ್ ಹಾಕುವೆ. ಇನ್ನ್ ಸಣ್ಣ ಜುವದವಾದರೆ ಹೊಟ್ಟೆನ ಕ್‌ರ್ಲ್‌ನ ಬಗ್ದ ಹಾಕುವೆ. ಅದೇಂಗೋ ಲಿಂಗಪ್ಪಣ್ಣ ಅದರ್‌ಂದ ತೊಪ್ಸಿಕಂಡರೂ ಅವರ ಬಲ್ದ ಕೈನ ಹಂದಿ ಅಗ್ದ್ ಅಗ್ದ್ ಹಾಕ್ತಾ ಉಟ್ಟು. ಬಲ್ದ ಕೈಯೇ ಹಂದಿನ ಬಾಯೊಳಗೆ ಉಟ್ಟು, ಕೈ ತಟ್ಟ್‌ನ ಎಲು ಮುರ್ದ್‌ಹೊದ್ ಲಿಂಗಪ್ಪಣ್ಣಂಗೆ ಗೊತ್ತಾತ್. ಇನ್ನ್ ಬರೇ ಮಾಸ ಮತ್ತೆ ಚೋಲಿಲಿ ಕೈ ಉಟ್ಟು. ಅದರ ಹಿಡ್ದ್ ಹಂದಿ ಎಳ್ದರೆ ಅರ್ಧ ಕೈನ ಹಂದಿ ಕಚ್ಚಿಕಂಡ್ ಹೋದ್ದೆ?! ಏನ್ ಮಾಡುದೂಂತ ಯೋಚನೆ ಮಾಡ್ದ ಅವು ಇನ್ನೊಂದು ಕೈಲಿ ಹಂದಿನ ಕೆಬಿನ ಗಟ್ಟಿ ಹಿಡ್ಕಂಡೊಳೊ. ಅಷ್ಟೊತ್ತಿಗೆ ಕಾಡ್ ಹೊಡ್ಯೊವ ಜನಂಗ ಬಂದ್ ಎತ್ತಿದೊ. ಹಂದಿನೊಟ್ಟಿಗೆ ಲಿಂಗಪ್ಪಣ್ಣನ ಉರ್ದಾಟನ ನೋಡ್ದೊವು ಯಾರೂ ಹಕ್ಕಲೆ ಬಾವ ಧೈರ್ಯ ಮಾಡ್ತಿಲೆ. ಎಲ್ಲಿ ಹಂದಿ ನಮ್ಮ ಮೇಲೆ ಬಂದದೆನೊಂತೇಳಿ ದೂರ ದೂರಲೇ ನಿಂತೊಳೊ! ಇನ್ನ್ ಕೆಲೊವು ಹಕ್ಕಲೆ ಇದ್ದ ದೈಗಳ ಮೇಲೆ ಹತ್ತುದೂ ಇಳ್ಯೊದುಗಡ. ಲಿಂಗಪ್ಪಣ್ಣನ ಬಂಜನ ನೋಡಿ ಬುಡ್ಲೊಮೊಂತೇಳಿ ಇಳ್ದರೂ ಹಕ್ಕಲೆ ಹೋವ ಧೈರ್ಯ ಮಾಡ್ತಿಲೆ. ಹಂದಿನ ಕೆಬಿಲಿ ಗಟ್ಟಿ ಅಮುರ್‍ಸಿ ಹಿಡ್ದದರ್‍ಲಿ ಹಂದಿಗೆ ಇವರ ಇನ್ನೊಂದು ಕೈನ ಎಳ್ದ್ ತುಂಡು ಮಾಡಿಕೆ ಆತ್‌ಲೆ, ಇವರ ಎರ್ಡ್ ಕಾಲ್‌ನ

ಸುತ್ತು ಹಾಕಿ ಹಂದಿನ ತೊಡೆ ಸೆರೆಲಿ ಅಮುರ್ಸಿ ಹಿಡ್ಕಂಡೊಳೊ. ಒಂದು ಕಾಲ್‌ಗಂಟೆ ಹೊತ್ತ್ ಇವರ ಉರ್ಡಾಟ ನಡ್ತ್. ಹಂದಿ ಇವರ ಕೈನ ಬುಡ್ದುಲೆ, ಇವು ಹಂದಿನ ಹೋಕೆ ಬುಡ್ದುಲೆ. ಕೈನ ಹಂದಿ ಬುಡ್ತಿದ್ದರೆ ಇವು ಹಂದಿನೊಳೂ ಬುಡ್ತಿದ್ದೊಗಡ. ಅಷ್ಟೊತ್ತಿಗೆ ಆಚೆಪುಡೆಲಿ ಬಿಲ್ಲ್ ನಿಂತಿದ್ದ ದೋಲನ ರಾಮಣ್ಣ ಗೌಡ್ರು ಅಲ್ಲಿಗೆ ಎತ್ತಿದೊ. ಕೈಲಿ ಬೆಡಿ ಇದ್ದರೂ ಈ ಉರ್ಡಾಟದ ನಡುಲಿ ಗುಂಡು ಹೊಡ್ಯೊದು ಹೇಂಗೇಂತೇಳಿ, ಕೈಲಿದ್ದ ಕಡ್ಪತ್ತಿ ತೆಗದ್ ಹಂದಿಗೆ ಕ್‌ಡ್ದೊ. ಹಲ್ಸಿನ ಕ್ಯಾಗೆ ಗಡಿ ಹಾಕಿದಂಗೆ ಹಂದಿ ಕುತ್ತಿಗೆಲಿ ಕತ್ತಿ ಇಸಿ ಗಸ ಗಸ ಕೊಯ್ದ್ ಹಾಕಿದೊ. ಅಲ್ಲಿಗೆ ಹಂದಿನ ಅಬ್ಬರ ನಿತ್ತತ್. ಲಿಂಗಪ್ಪಣ್ಣನ ಕೈನ ಹಂದಿನ ದವ್ಡೆಂದ ಬುಡ್ಸಿದೊ. ಕೈನ ಕೊಬ್ಬುನ ಗಾಣಕ್ಕೆ ಕೊಟ್ಟ ಹಾಂಗಿತ್. ಲಿಂಗಪ್ಪಣ್ಣಂಗೆ ಎದ್ದ ನಿಲ್ಲಿಕೆ ಬಸ ಇಲ್ಲೆ. ಅವರ ಕೈ ಬರೆ ಚರ್ಮಲಿ ನೇಲ್ತಾ ಉಟ್ಟು. ನೆತ್ರ್ ಅರ್ದದೆ. ಸೊಂಟಲಿದ್ದ ತೋರ್ತುನ ತೆಗ್ದ್ ಕೈಗೆ ಕಟ್ಟಿದೊ. ಅವರ ಹೊತ್ತ್‌ಕಂಡೇ ಮನೆಗೆ ಬಂದೊ. ಆದರೂ ನೆತ್ರ್ ಅರೆದು ನಿಂತ್‌ತ್ಲೆ. ಆ ಕಾಲಲಿ ಆಸ್ಪತ್ರೆ, ಡಾಕ್ಟ್ರ ಸಂಗತಿ ಗೊತ್ತಿಲ್ಲೆ. ಯಾರೋ ಹೇಳ್ದೊ ಮನೆಲಿದ್ದರೆ ಆಕಿಲೆ ಬೆಳ್ಳಾರಲಿ ಬಿ.ಕೆ. ರೈಂತ ಡಾಕ್ಟ್ರ ಒಳೊ ಅವರಕ್ಕಲೆ ಕರ್ಕಂಡ್ ಪೋಯೀಂತ. ಅದ್ಕೆ ಲಿಂಗಪ್ಪಣ್ಣ ಕೊಟ್ಟ ಉತ್ತರ ಎಂತದ್ ಗೊತ್ತುಟಾ, "ಡಾಕ್ಟ್ರ ಹಕ್ಕಲೆ ಮತ್ತೆ ಪೋಯಿ, ಮುಂದೆ ಆ ಹಂದಿನ ಗೈಪು ಮಾಡಿ, ಎರ್ಡ್ ತುಂಡು ತಿಂದ ಮೇಲೆನೇ ಮನೆಂದ ಹೊರ್ಡುದು..!!

✍ಎ.ಕೆ. ಹಿಮಕರ

ಗುತ್ತಿಗಾರು,
ಸುಳ್ಯ ತಾಲೋಕು, ದ.ಕ.

*ಎಷ್ಟೋ ಬೇಟೆಗಾರರ್ ಇಂದ್ ವಯೋವೃದ್ಧರಾಗಿ ಕುದ್ದೊಳೊ. ಅಂತವರ ಅನುಭವನ ಹಿಂಗೆ ಕೇಳಿ ಬರ್ದರೆ ಬೇಟೆ ಸಾಹಿತ್ಯಕ್ಕೆ ಒಳ್ಳ ಕೊಡುಗೆ ಸಿಕ್ಕಿದೆ.*

✍ಸಂ.

# ಆರೋಗ್ಯಕ್ಕಾಗಿ ಯೋಗ

"ಯೋಗ" ಎಂದ ತಕ್ಷಣ ನಾವುಗೆ ನೆಂಪಿಗೆ ಬಾದು ಯೋಗ ಆಸನಗ. ಆದರೆ ಆಸನಗ ಮಾತ್ರ ಯೋಗ ಅಲ್ಲ. ಯೋಗ ಅಂದರೆ, ಜೀವಾತ್ಮನ ಪರಮಾತ್ಮನೊಟ್ಟಿಗೆ ಸೇರ್ಸುದು, ಸಮಾಧಿ ಸ್ಥಿತಿಗೆ ಸಾಧಿಸುದು, ದೇಹದ ಇಂದ್ರೀಯಗಳ್‌ನ ಹತೋಟಿಲಿ ಇಟ್ಕ್ಂಬೋದು, ಮಾನಸಿಕ ಏಕಾಗ್ರತೆನ ಸಾಧಿಸುದುತ ಬೇರೆ ಬೇರೆ ಅರ್ಥ ಉಟ್ಟು. ಮಹರ್ಷಿ ಪತಂಜಲಿ ಯೋಗಶಾಸ್ತದ ಪಿತಾಮಹ. ಅವನ ಪ್ರಕಾರ ಯೋಗ ಅಂದರೆ, "ಯೋಗ ಚಿತ್ತವೃತ್ತಿ ನಿರೋಧೆ". ಚಂಚಲ ಮನಸ್ಸ್‌ನ ಒಂದೆಡೆ ಸ್ಥಿರಗೊಳ್‌ಸುದು ಎಂದರ್ಥ.

ಹಿಂದೆಲ್ಲ ಯೋಗ, ಋಷಿ–ಮುನಿಗ ಇಂದ್ರಿಯಗಳ್‌ನ್ನ ನಿಗ್ರಹಿಸಿಕೆ, ಮನಸ್ಸ್‌ನ ಹತೋಟಿಲಿ ಹಿಡ್ಕ್ಂಬಕ್ಕೆ ಹಲವು ದಿನಗಳ ಮುಟ್ಟ ಹಸಿವು, ನಿದ್ದೆ, ಚಲನವಲನಗಳ್‌ಲ್ಲದೆ ತಪಸ್ಸು ಮಾಡಿ ಏಕಾಗ್ರತೆ ಶಕ್ತಿನ ಪಡಿತ್ತಿದ್ದ. ಅದಕ್ಕೆ ಕೆಲವು ಯೋಗ ಸಾಧನೆಗ ಸಹಾಯ ಮಾಡುವೆ. ಯಮ, ನಿಯಮ, ಆಸನಾ, ಪ್ರಾಣಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ ಎಂಬ ಎಂಟ್ ಯೋಗ ಸಾಧನೆಗ ಒಳೊ. ಇದೇ 'ಅಷ್ಟಾಂಗ ಯೋಗ'. ಈಗೆಲ್ಲ ಯೋಗದ ಬಗ್ಗೆ ರಾಷ್ಟ್ರ–ಅಂತರಾಷ್ಟ್ರೀಯ ಮಟ್ಟಲಿ ಹೆಸರ್ ಕೇಳಿ ಬರ್ತಾ ಉಟ್ಟು. ಯೋಗ ಸಾಧನೆ ಮಾನಸಿಕ ಸ್ಥೈರ್ಯನ ಕಳ್ಕ್‌ಕೊಂಬೊತ್ತಿರೊ ಇಂದಿನ ಜನಾಂಗಕ್ಕೆ ಹೆಚ್ಚ್ ಪ್ರಯೋಜನ ಆದೆ. ಇದರ್ಲಿ ಹೇಳ್‌ದ ಆಸನಗ ದೈಹಿಕ ರೋಗಗಳ–ಮನೋರೋಗಗಳ ಚಿಕಿತ್ಸೆಲಿ ಲಾಯ್ಕ್‌ನ ಫಲಿತಾಂಶ ಕೊಡ್ತಾ ಉಟ್ಟು. ಶರೀರಸ್ಥ ಗ್ರಂಥಿಗಳ ಕೆಲ್ಸ, ನರಮಂಡಲದ ಉತ್ತೇಜನಕ್ಕೆ, ಸೌಂದರ್ಯ ವೃದ್ಧಿಯಾಕೆ ಇವು ನಾವುಗೆ ಪೂರಕ ಆದೆ.

ಯೋಗ ಮನ್‌ಷ್ಯನ ವ್ಯಕ್ತಿತ್ವ ಬೆಳವಣಿಗೆಲಿ ಸಾಮರಸ್ಯನ ಉಂಟು ಮಾಡ್ದೆ. ಹಾಗೇನೆ, ಸಮತೋಲನ ಉಂಟು ಮಾಡ್ದೆ, ಅದರ ಮೂಲಕ ಪರಿಪೂರ್ಣ ಆದ ಉನ್ನತಿನ ಪಡೆಯಕ್ಕೆ ನೆರವಾದೆ. ದೈವೀ ಗುಣಗಳಾದ ಪ್ರೇಮ, ವಾತ್ಸಲ್ಯ, ತ್ಯಾಗ, ಸೇವೆ, ಸಹನೆ, ಶಾಂತಿ, ಇತ್ಯಾದಿಗಳ್‌ನ್ನ ಅಳವಡಿಸಕಂಡ್ ಮನ್‌ಷ್ಯನಲ್ಲಿ ದೃಢವಾಗಿ ನೆಲ್ಸಿದೆ.

ಯೋಗನ ನಿತ್ಯದ ಜೀವನಲಿ ಅಳವಡಿಸಿಕಂಡ್ರೆ ಮನೋ ಶಕ್ತಿ ಮುಂದಕ್ಕೆ ಬರುವ ತೊಂದರೆನ ತೀವ್ರತೆಗಳ್‌ನ ಕಮ್ಮಿ ಮಾಡಿ ಪರಿಸ್ಥಿತಿನ ಎದ್ರಿಸಿಕ್ಕೆ ಶಕ್ತಿನ ಕೊಟ್ಟದೆ.

ಮನ್‌ಸ್ಸಿನ ಹೆದ್ರಿಕೆಂದಾದ ಸಮಸ್ಯೆಗಳಾದ ರಕ್ತದೊತ್ತಡ, ಕರಳಿನ ಹುಣ್ಣು, ತಲೆ ಬೇನೆ, ಮೈಗ್ರೇನ್, ತಲೆಸಿಡಿತ, ಮಧುಮೇಹ, ದಮ್ಮು, ಗಂಟ್‌ಬೇನೆಗಳಂತ ತೊಂದರೆಗೆ ಪರಿಹಾರನ ಕೊಟ್ಟದೆ. ಅದರ ಜೊತೆಗೆ ಮನ್ಸ್‌ನ ಶಾಂತ ಸ್ಥಿತಿಗೆ

ತರುವಲ್ಲಿ ಉಪಕಾರಿಯಾದೆ.

ವಂಶಪಾರಂಪರ್ಯಂದ ಬಂದ ರೋಗಗ ಕೂಡ ಯೋಗಂದ ನಿಯಂತ್ರಣಕ್ಕೆ ಬಂದದೆತ ವಿವೇಕಾನಂದ ಕೇಂದ್ರ ಯೋಗ ಅನುಸಂಧಾನ ಸಂಸ್ಥಾನವು ಕೆಲವು ಸಂಶೋಧನೆಂದ ಹೇಳ್ಯೊಳೆ.

ಯೋಗಾಭ್ಯಾಸಂದ ಬೇನೆನ ತೀವ್ರತೆನ ಕಮ್ಮಿ ಮಾಡಿಕೆ ಸಾಧ್ಯ.

ಪರಿಸರ ಮಾಲಿನ್ಯ ಜಾಸ್ತಿ ಇದ್ದಲ್ಲಿ ಸರಿಯಾದ ಪ್ರಾಣಯಾಮ ಮಾಡ್ಕಂಡಿದ್ದರೆ, ಮಾಲಿನ್ಯಂದ ಬರುವ ಹಾನಿನ ಕಮ್ಮಿ ಮಾಡಿಕೆ ಸಾಧ್ಯ ಆದೆ.

ಪ್ರಾಣಯಾಮ ಮಾಡ್ಕಂಡ್ ಬಂದರೆ, ಅಂತರಂಗ ಜಾಗೃತಿ ಸಾಧ್ಯ ಆದೆ. ಅದ್ರ ಮೂಲಕ ತನ್ನ ದೇಹದ ಮತ್ತೆ ತನ್ನ ಅಂತರಂಗದ ರಹಸ್ಯನ ತಿಳ್ಕಂಬಕ್ಕೆ ಸಾಧ್ಯ ಆದೆ.

ಯೋಗಾಭ್ಯಾಸನ ಮಾಡ್ದರಿಂದ ಮನ್‌ಸ್ ವಿಕಾಸ ಆಗಿ ಭ್ರಾತೃಪ್ರೇಮ, ವಿಶ್ವ ಪ್ರೇಮ ಮನಸ್ಸ್‌ಲಿ ತುಂಬವಂಗೆ ಮಾಡ್ದೆ. ಈ ಪ್ರೇಮನೆ ತ್ಯಾಗ, ಸೇವೆ ಮಾಡಿಕೆ ನೆರವಾದೆ.

ಆಧ್ಯಾತ್ಮ ಸಾಧನೆ, ರೋಗ ನಿವಾರಣೆ ಮನೋ ಸಂಯಮ, ಪರಮಾನಂದ ಜೀವನ ಮನೋ ಸಮತೋಲನ, ಏಕಾಗ್ರತೆ, ಹಿಂಗೆ ಎಲ್ಲಾ ಸಾಧ್‌ಕರಿಗೂ ಅವರವರ ಗುರಿ ಸೇರಿಕೆ ಯೋಗ ಮಾರ್ಗದರ್ಶಿಯಾದೆ.

✍ಗ್ರೀಷ್ಮಾಗೌಡ ಆನ್ಯೋಜಿ.

ವಿದ್ಯಾರ್ಥಿನಿ, ಆಳ್ವಾಸ್ ಕಾಲೇಜು ಆಫ್
ನ್ಯಾಚುರೋಪತಿ ಅಂಡ್ ಯೋಗಿಕ್ ಸೈನ್ಸ್

## ಮರ ಕೆಸ

ಆಟಿ ಹದ್ನೆಂಟರಂದೇ
ಮರ ಕೆಸ ಸೊಪ್ಪ್‌ಂದ ಪತ್ರೊಡೆ ಮಾಡಿವೆ.
ಪತ್ರೊಡೆ ಮಾಡಿ
ಅದರ್‌ನ ಕೋಳಿ ಗೈಪುನಂಗೆ ಮಾಡಿವೆ
ಆಗಂತೂ ಮನೆ ತುಂಬಾ
ಕೋಳಿಗೈಪುದೇ ಗಮ.
ಆ ಗೈಪು ಮಾಡಿ ರೊಟ್ಟಿ ಮಾಡಿಕಂಡ್
ಬೆಳಿಗ್ಗೆ ತಿಂಡಿಗೆ ಗಮ್ಮತ್ತಾಗಿ
ತಿಂದವೆ.

ಗಾದೆ ಗಮ್ಮತ್ತ್

# 1. 'ಅ' ಕಾರದ ಚಮತ್ಕಾರ

1. ಅಂಕೆ ಇಲ್ಲದ ಕಪಿ ಲಂಕೆ ಸುಟ್ಟತ್
2. ಅಂಗ ಇಲ್ಲದವಂಗೆ ಮಂಗನ ಚೇಷ್ಟೆ
3. ಅಂಗೈನ ಮೇಂಗೈ ಮಾಡಿವೆ ಮೇಂಗೈನ ಅಂಗೈ ಮಾಡಿವೆ ಜನ
4. ಅಂಗೈ ಹುಣ್ಣಿಗೆ ಕನ್ನಡಿ ಯಾಕೆ?
5. ಅಂಗೈ ಹಂಗೆ ಹೊಲ ಮಾಡಿರೆ ಮುಂಗೈ ತುಂಬಾ ತುಪ್ಪ
6. ಅಂಡೆ ಬಾಯಿನಾದ್ರೂ ಕಟ್ಟಕ್ ದೊಂಡೆ ಬಾಯಿನ ಕಟ್ಟಿಕೆ ಆಕಿಲ್ಲೆ
7. ಅಂತೂ ಇಂತೂ ಕುಂತಿ ಮಕ್ಕಳಿಗೆ ರಾಜ್ಯ ಇಲ್ಲೆ
8. ಅಂದಿಗೆ ಅದೇ ಸುಕ ಇಂದಿಗೆ ಇದೇ ಸುಕ
9. ಅಂಬು ಅಟ್ಟಲಿ ಬಿಲ್ಲ್ ಬೆಟ್ಟಲಿ
10. ಅಕ್ಕಂಗೆ ಆಳಿಲ್ಲೆ ಕುಕ್ಕಂಗೆ ಕೂಳಿಲ್ಲೆ
11. ಅಕ್ಕ ಇರಿಕೆ ಮುಟ್ಟ ಭಾವ
12. ಅಕ್ಕನ ಚಿನ್ನ ಆದ್ರೂ ಅಗ್ಸಾತಿ ಕದಿಯದಿರ್ಕಿಲ್ಲೆ
13. ಅಕ್ಕ ಸತ್ತರೆ ಅಮವಾಸೆ ನಿತ್ತದೆಯಾ?
14. ಅಕ್ಕಿ ಮೇಲೆ ಆಸೆ ನೆಂಟ್ರ ಮೇಲೆ ಪ್ರೀತಿ
15. ಅಕ್ಕಿ ಕೊಟ್ಟು ಅಕ್ಕನ ಮನೆಗೆ ಹೋಕಾ?
16. ಅಗಲ ಆಗಿ ಮಾಡಕ್ಕಿಂತ ಆಳ ಆಗಿ ಮಾಡ್
17. ಅಗಳಿಂದ ಅನ್ನದ ಪರೀಕ್ಷೆ
18. ಅಗ್ಗದಾಸೆಗೆ ಮುಗ್ಗಿದ ಜೋಳ
19. ಅಜ್ಜಂಗೆ ಪಿಳ್ಳಿ ಕೆಮ್ಮಿಕೆ ಕಲ್ಸಿದಂಗೆ
20. ಅಜ್ಜಿ ಇಲ್ಲದ ಮನೆ ಮಜ್ಜಿಗೆ ಇಲ್ಲದ ಊಟ
21. ಅಜ್ಜಿ ನೂತದೆಲ್ಲಾ ಅಜ್ಜನ ಜನಿವಾರಕ್ಕೆ
22. ಅಜ್ಜಿ ಸಾಂಕಿದ ಮಂಜ ಯಾವ ಬೊಜ್ಜಕ್ಕೂ ಬಾದುಲೆ
23. ಅಡಿಕೆ ಕದ್ದರೂ ಕಳ್ಳ ಆನೆ ಕದ್ದರೂ ಕಳ್ಳ

✍ಕುಲ್ಲಚನ ಕಾರ್ಯಪ್ಪ

ಕುಂಬಳದಾಳು ಗ್ರಾಮ
ಮಡಿಕೇರಿ ತಾಲೂಕು
ಕೊಡಗು ಜಿಲ್ಲೆ.

## 2. ಗಾದೆಗ

1. ಕೆಂಪ ಅಲ್ಲಿ ಕೆನೆಕನ ಕೋಳಿ ಇಲ್ಲಿ ಕೂಂಗಿದೆ.
2. ಕತ್ತೆಗೇನ್ ಗೊತ್ತು ಭತ್ತದ ಗುಣ.
3. ಅಜ್ಜಂಗೆ ಕಚ್ಚೆ ಬಿಚ್ಚ್‌ಕನ ಕೈಲಿ ಇದ್ದ ದೊಣ್ಣೆ ಬಿದ್ದದೆ.
4. ಅತ್ತೆ ಮಗ ದೊಡ್ಡದಾಕನ ಅಣ್ಣನ ಮಂಜ ದೊಣ್ಣೆ ಹಿಡ್ದದೆ.
5. ಕೊತ್ತಿಗೆ ಸಿಟ್ಟ್ ಬಾಕನ ಎಸ್‌ಂಡ್‌ನೂ ಸೂಟೆಹಿಡ್ತ್.
6. ಕೆಪ್ಪಂಗೆ ಕೇಳ್‌ಕನ ಗೊಗ್ಗರೆನ ಹಲ್ಲ್ ಬೀತ್.
7. ಕಳ್ಳನ ಕಥೆಕಟ್ಟಿ ಸುಳ್ಳನೂ ಸಿಕ್ಕಿ ಬೀತ್.
8. ಹುಟ್ಟುಕನ ಇದ್ದ ಬುದ್ಧಿ ಸಾಯಕನ ಮುಗ್ತ್.
9. ಹಾರುವೆ ಬಾನಮುಟ್ಟ ಮತ್ತೆಲ್ಲಿಗೆ ಹಾರುವೊ.
10. ಹಾವುಗೆ ಹಲ್ಲ್‌ಲಿ ವಿಷ ಚೇಳ್‌ಗೆ ಬಾಲಲಿ ವಿಷ.
11. ಹೊರಗೆ ನಿಂಬೆ ಹಂಣ್ ಒಳಗೆ ಪರಂಗಿ ಹಂಣ್
12. ಎತ್ತ್ ಏರಿಗೆಳೆಕನ ಕೋಣ ನೀರಿಗೆಳ್ದದೆ.
13. ಹುಣ್ಣಿಮೆ ಚಂದ್ರಂಗೆ ರಾಹು ಅಡ್ಡ ಬಂದಾಂಗೆ
14. ಇಚ್ಚೆ ಇಲ್ಲದವಂಗೆ ಮೊಸುರ್‌ಲಿ ಕಲ್ಲ್.
15. ಬೊಗ್ಗಿದವಂಗೆ ದೊಣ್ಣೆಲಿ ಪೆಟ್ಟ್.
16. ಸಾಂಕ್‌ಕನ ನಾಯಿಮೊರಿ ಬೆಳೆದಾಕನ ಹುಲಿಮೊರಿ.
17. ನೋಡಿಕೆ ಅರಮನೆ, ಮನೆಲಿ ಇಲ್ಲೆ ಒಂದು ಸೇರ್ ಅಕ್ಕಿ.
18. ಕಾಂಬಕ್ಕೆ ಬಂಟ ಅವನಲ್ಲಿಲ್ಲೆ ಬಿಡಿಕಾಸ್.
19. ಕಂಡುಟು ಭಂಡ ಹಾರ್ದಂವ ಬಾನಮುಟ್ಟ.
20. ಸಿಕ್ಕಿಟು ಸುಳಿಲಿ ಬದುಕಿ ಬಂದರೆ ಬಾತ್.
21. ಕೊಯ್ದದೆ ಕೆಸನ ಮುಳುಗಿಟು ನೀರ್‌ಲಿ.
22. ಬಾತ್‌ಅಲ್ಲಿ ನೋಡಿ ಬೆದ್ರ್ ಒಳಗಿನ ಚದ್‌ರಂಗಿ
23. ಬೀಸಿದೆ ಸೂಟೆ ಯಾರೊಬ್ಬರ ಹಂಗ್‌ಇಲ್ಲೆ.
24. ಕಾಂಬಕ್ಕೆ ರಾಣಿ ಮೈ ಎಲ್ಲ ಆಣಿ.
25. ಅಳಂಕ್‌ನ ಕೊಯ್ಯಕನ ರಾತ್ರಿ ಇಡಿ ಪರ್ಚಿತ್
26. ಬೇರೆವರ ಕಾದೆಣ್ಣೆಲಿ ತನ್ನದೊಂದು ಹಪ್ಪಳ ಹೊರ್ದಂಗೆ.
27. ಕಣ್ಣ್ ಕಟ್ಟ್‌ವ ಮಾಂವ ಕಲ್ಲಡಿಲಿ ಮಲ್ಗಿತ್.

28. ದಾರ್ಲಿ ಇದ್ದ ಕಲ್ಲ್ ಹೊತ್ತ್ ಊರೆಲ್ಲ ತಿರ್ಗಿತ್.
29. ಸುಂಪೆ ಮಡಿಕೆ ಅಡಿಗೆ ತಲೆಗೇಕೆ ಸುಂಪೆ.
30. ಸಣ್ಣ ಮೆಣ್ಸ್‌ನ ಖಾರ ತಿಂದರೆ ತಿಳಿಯೊದು.
31. ಗಂಡ ಹೆಂಣ್‌ನ ಜಗಳ ಉಂಡು ಬೀಳ್ಕನಮುಟ್ಟ.
32. ಮುಚ್ಚ ಸೊಪ್ಪು ಅಡ್ಡಿದಂಗೆ.
33. ಓಡುವ ಕಡವೆ ಹಿಂದೆ ಹೋಬಡ ಪೆಟ್ಟಾದ ಹಂದಿನ ಮುಂದೆ ಹೋಬಡ.
34. ಮುಳ್ಳಡಿ ಹುಲ್ಲು ಕಲ್ಲಡಿ ನೀರ್.
35. ಹಾಕಿದ ಕುಪ್ಪಸ ಹಾರಾಡಿರು ತಪ್ಪಿಕ್ಕಿಲ್ಲೆ.
36. ನೋಡಿಕೆ ಚಿನ್ನ ಮುಟ್ಟಿರೆ ಕೆಂಡ.
37. ಕೊಂಜೋಳಿಗೆ ಬಿದ್ದ ಮೀನ್‌ನಂಗೆ.
38. ಲೆಜ್ಜ ಮಂಡಂಗೆ ಪೆಜ್ಜೆಗೆ ಕಮ್ಮಿಲ್ಲೆ.
39. ಕಡಿಕೆಲಿದ್ದ ಭತ್ತ, ಕೊಡಪಾನದ ನೀರ್ ಮುಗ್ದಂಗೆ.
40. ಹಲ್ಲಿಲ್ಲದವಂಗೆ ಕಡ್ಲೆ ಕೊಟ್ಟಂಗೆ.
41. ಮೂಗಿಲ್ಲದವಂಗೆ ಪರಿಮಳ ತಿಕ್ಕಿದಂಗೆ.
42. ಕೊತ್ತಿನ ತಲೆಗೆ ತುಪ್ಪ ಹೊಯ್ದಂಗೆ.
43. ಕತ್ತೆನ ಬಾಲಕ್ಕೆ ಡಬ್ಬಿ ಕಟ್ಟಿದಂಗೆ.
44. ಕಕ್ಕೆ ಕಾಲಿಗೆ ಗೆಜ್ಜೆ ಕಟ್ಟಿದಂಗೆ.
45. ಏಡ್‌ನ ಕೆಬಿಗೆ ಸಾಸಿವೆ ಹಾಕಿದಂಗೆ.
46. ಸೋಮಾರಿಗೆ ಹಸೆ ಮಣೆ ಯಾಕೆ ಬೇಕು.
47. ಮೂರ್ಕಂಗೆ ಯಾಕೆ ಬುದ್ದಿ ಮಾತ್.
48. ತಿರುಕಂಗೆ ಯಾಕೆ ಭೂಮಿ, ಮನೆ, ಬದ್‌ಕ್.
49. ಕೊತ್ತಿಗೆ ಆಟ ಎಲಿಗೆ ಪ್ರಾಣ ಸಂಕಟ.
50. ಕುದ್ದ್ ತಿಂಬವಂಗೆ ದರಿದ್ರ ತಪ್ಪದ್
51. ಜಾಸ್ತಿ ಪ್ರೀತಿ ಪ್ರಾಣಕ್ಕೆ ಹಾನಿ.
52. ಉಮಿ ಮಿದ್ದ್ ಕೈ ದಡ್ಡ್ ಮಾಡಿಕಂಡಂಗೆ.
53. ಕೊಟ್ಟದ್ದ್ ಇರಕನ ಮುಟ್ಟ, ದುಡ್ಡದ್ದ್ ಸಾಯಕನ ಮುಟ್ಟ.
54. ಅತ್ತೆ ಮೇಲೆ ಸಿಟ್ಟ್‌ಲಿ ಕೊತ್ತಿಗೆ ಬೊಡ್ದಂಗೆ.
55. ಕರ್‌ಬುಡಿಕೆ ಹೋಕನ ಎತ್ತ್, ಹೂಡಿಕೆ ಹೋಕನ ಹಸ್.
56. ಕುತ್ತಿಗೆಗೆ ಮೆಂಟೆಕಟ್ಟಿರೆ ಬುದ್ದಿ ಬಂದದೆ.
57. ಅಳ್ದ್ ಉಳ್ದ ಊರಿಗೆ ಇದ್ದವನೇ ಗೌಡ.

58. ಕೆಟ್ಟ ಮೇಲೆ ಬುದ್ಧಿ ಸತ್ತ ಮೇಲೆ ದುಃಖ
59. ಧರ್ಮಕೆ ದಟ್ಟಿ ಕೊಟ್ಟರೆ ಓತ್ತ್‌ಲಿಲಿ ಹೋಗಿ ಮೊಳ ಹಾಕಿತ್.
60. ಕಳ್ಳನ ಮನಸ್ಸ್ ಹುಳ್ಳ ಹುಳ್ಳಂಗೆ.
61. ಅಂಗೈ ಹುಂಣಿಗೆ ಕನ್ನಡಿ ಬೇಕಾ?
62. ಬಂಟ ಮಾಡಿದ್ ಗಂಟ್‌ಗೆ, ಗೌಡ ಮಾಡಿದ್ದ್ ದಂಡಕ್ಕೆ.
63. ಹೊಟ್ಟೆಗೆ ಹಿಟ್ಟ್ ಇಲ್ಲೆ ಊರ್ ಮುಂದೆ ಆಡಂಬರ.
64. ಹಾಸಿಗೆ ಇದಷ್ಟ್ ಕಾಲ್ ಚಾಚ್.
70. ಕೆತ್ತಿಕೆ ಮೊಣ್ಣ್ ಇಲ್ಲೆ ಮೆಟ್ಟಿಕೆ ನೆಲೆ ಇಲ್ಲೆ.
71. ಗುಮ್ಮಂಗೆ ಗೂಡ್‌ನ ಚಿಂತೆ, ಹದ್ದ್‌ಗೆ ಹಾರುವ ಚಿಂತೆ.
72. ಪರ ಊರ ಸುಭಗಂದ ಊರ ಕಳ್ಳನೇ ಮೇಲ್
73. ಮಾತ್ ಮನೆ ಕೆಡ್ಸಿತ್ ತೂತು ಒಲೆ ಕೆಡ್ಸಿತ್.
74. ಕುಂಬಳಕ್ಯಾ ಕದ್ದಂವ ಹೆಗ್‌ಲ್ ನೋಡಿಕಂಡ ಹಾಂಗೆ
75. ನೀರ್‌ಲಿ ಮೀನ್‌ನ ಹೆಜ್ಜೆ ಹುಡ್ಕಿದಂಗೆ.
76. ಕೇಡಂಗೆ ಮೈ ಎಲ್ಲ ವಿಷ.
77. ಸಾಧಿಸಿರೆ ಸಫಳ ನುಂಗಕ್.
78. ಪುಸ್ತಕ, ಹೆಂಣ್ ಇನ್ನೊಬ್ಬರಲ್ಲಿ ಇದ್ದರೆ ಸರಿಯಾಗಿ ಇರುದು ಕಷ್ಟ.
79. ಅಂಬಿಗಂಗೆ ಅಂಬುಲಿ ಬೇಟೆ ಬೇಡಂಗೆ ಕಾಡ್‌ಲಿ ಬೇಟೆ.
80. ಕುದ್ಕ ಬಾಮಿಗೆ ಬಿದ್ದರೆ ಊರವರ್‌ಂದ ಒಂದೊಂದು ಕಲ್ಲ್ ಬೀಳುವಂಗೆ.
81. ಮಾಟದ ಮಾಲಿಂಗ ಹೋಕನೇ ಗೊತ್ತು.
82. ಸೊಕ್ಕಿದವಂಗೆ ಮರ್ಧನವೇ ಮೊದ್ದು.

✍'ಮಾಲಾಗೌ'

ಎಂ. ಲಕ್ಷ್ಮಣ ಗೌಡ
ಮಾಯಿಪನ ಮನೆ,
ಮಡಪ್ಪಾಡಿ ಗ್ರಾಮ ಮತ್ತು ಅಂಚೆ,
ಸುಳ್ಯ ತಾಲೂಕು, ದ.ಕ.
ಮೊ : 9483923310

# ನೀವೂ ಒಡ್ಸಿ

1. ನೆಂಟ ಹೋತ್, ನೆಂಟ ಬಾತ್, ಹೋದ ದಾರಿಲಿ ಬಾತ್ಲೆ ಬಂದ ದಾರಿಲಿ ಹೋತ್ಲೆ
2. ಮರದ ಕಾಲ್‌ನ ಗೂಡೆಗೆ ಕರಿಮೈ ಉಟ್ಟು, ಬೆಳ್ಳಿ ಕಡಗ ಹಾಕಿಟು, ರೊಯ್ಯಂತ ಇಳ್ಟದೆ ಸರ್ರಂತ ಮೇಲೆ ಹೋದೆ
3. ವಾರೆ ಕೋರೆನ ಗಳೆ, ಕಚ್ಚಿದವರ ಬಾಯಿಗೆ ಉಚ್ಚೆ ಹೊಯ್ದದೆ
4. ಓಲಗ ಕಾಣದ ಚಪ್ಪರ, ಕರಿಮಣಿ ಸರ ಮುದ್ದೆ ಮಾಡ್ದಂಗೆ ಚಪ್ಪರಲಿ ನೇತಾಡ್ದೆ
5. ಒಂದ್ ಹಂಡೆ, ಹಂಡೆನೊಳಗೆ ಮಡ್ಕೆ, ಮಡ್ಕೆನೊಳಗೆ ಕುಡಿಕೆ, ಕುಡಿಕೆನೊಳಗೆ ಸಿಹಿನೀರ್
6. ಒಂದ್ ಕಂಬಕೆ ನಾಕ್ ಕಿವಿಗ, ಅದ್ರ ಒಳಗೊಂದ್ ಗುಂಡ್
7. ಗದ್ದೆ ಹೂಡ್ತ್‌ಲೆ, ಬೀಜ ಹಾಕಿತ್ಲೆ, ಕಣ ಮಾಡ್ತ್‌ಲೆ, ಕಾಳ್ ತೂರಿತ್ಲೆ, ಜರಡಿ ಹಿಡ್ತ್‌ಲೆ, ಕಣಜ ತುಂಬಿತ್ಲೆ, ಕುಕ್ಕೆಲಿ ಇಸಿ ಮಾರಿಕಂಡ್ ಹೋದರೆ ಬೇಡಂತ ಹೇಳವು ಇಲ್ಲೆ.
8. ಮಾಡ್‌ನ ಮೇಲೆ ಹುಲ್ಲು ಹುಟ್ಟಿ ಕಿತ್ತರ್ ಬಾದ್ಲೆ.
9. ಇಷ್ಟುದ್ದ ಹೈದ ಅಷ್ಟುದ್ದ ಮುಂಡಾಸು ಸುತ್ತಿಟು
10. ಆರು ಮೂರು ಗೂಟ, ಗೌಡನ ತೋಟ, ಹೋಕೆ ಆದೆ ಬಾಕೆ ಆದ್ಲೆ
11. ಆಕಾಶ ಕಾಣದ ನೀರ್, ಅಗಸ ಕಾಣದ ಬಂಡೆಕಲ್ಲ್
12. ಅಪ್ಪ ಕಜ್ಜಿ ಪುರ್ಕ, ಮಂಜ ಲಾಯ್ಕ
13. ಪೊಪ್ಪನ ಕುದ್ರೆಗೆ ಮೈಯಿಡೀ ಗಾಯ
14. ಅಡಿಲಿ ಜುಂಗು, ನೊಡುಲಿ ತಾಮ್ರ, ಮೇಲೆ ಚಿನ್ನದ ಕಿರೀಟ
15. ತಾತನ ಹೊಟ್ಟೆನ ಹಿಡ್ಕಂಡ್ ಪುಳ್ಳಿ ನೇತಾಡ್ತ ಉಟ್ಟು
16. ಅಕ್ಕನ ಮನೆಗೆ ತಂಗಿಗೆ ಹೋಕೆ ಆದೆ, ತಂಗಿನ ಮನೆಗೆ ಅಕ್ಕಂಗೆ ಬಾಕೆ ಆದ್ಲೆ
17. ಡಬ್ಬಿ ಡಬ್ಬಿ ಒಂದೇ ಹಡಿ ಡಬ್ಬಿ, ಬಿಚ್ಚಿ ನೋಡ್ರೆ ಮುನ್ನೂರು ಡಬ್ಬಿ
18. ಕೋಣ ಮಲ್ಗಿಟು, ಬಳ್ಳಿ ಹಾಸಿಟು
19. ಕುತ್ತಿಗೆ ಉಟ್ಟು ತಲೆ ಇಲ್ಲೆ, ರಟ್ಟೆ ಉಟ್ಟು ಬೆರ್ಲ್ ಇಲ್ಲೆ, ತಡಿ ಉಟ್ಟು ಕಾಲಿಲ್ಲೆ
20. ಹುಗ್ಗಿಕಾನ ಕಾಳ, ಹೊರ್ದಿಕಾನ ಗೆಂದ
21. ಕಲ್ಲ್ ಮೆಟ್ಟಿದೆ, ಮುಳ್ಳ್ ಮೇದದೆ, ನೀರ್ ಕಂಡ್ರೆ ನಿತ್ತದೆ
22. ವಾರೆಕೋರೆನ ಮನೆ, ಆಚಾರಿ ಕಟ್ಟದ ಮನೆ, ಯಾರ್ ಮುಟ್ಟದ ಮನೆ
23. ಉಂಬಕೆ ಮುಂದೆನೆ ನಾಂತೇಳಿ ಬಂದದೆ
24. ಜಾಗೆ ಉಟ್ಟು ಜನಗ ಇಲ್ಲೆ, ಹಳ್ಳಲಿ ನೀರಿಲ್ಲೆ, ದಾರಿಲಿ ಗಾಡಿಗ ಇಲ್ಲೆ,

ಹಂಗಾರೆ ನಾ ಯಾರ್?

25. ಮರ ಹಲಗೆನ ಹೊತ್ತ್‌ಕಂಡ್, ಎರಡೆರಡ್ ಮರದ ತುಂಡು ಗಂಟ್ ಹಾಕಿಕಂಡ್, ಎರಡೆತ್ತ್‌ಗ ನಡ್ಸಿಕಂಡ್ ಹೋಗ್ವ ವಿಷಯ, ದಡ್ಡಂಗೆ ಗೊತ್ತಾಕಿಲ್ಲೆ
26. ಕಟ್ಟೆ ಇಲ್ಲದ ಕೆರೆಲಿ ತಟ್ಟೆ ತೇಲಿಕಂಡ್ ಬಂದದೆ
27. ಪೊರ್ಲ್ಲನ ಹಕ್ಕಿ ಬಾಲಂದ ನೀರ್ ಕುಡ್ದದೆ
28. ಮಣ್ಣ್ ಬಣ್ಣ, ನೀಲಿ ಕಣ್ಣ್, ಸಣ್ಣ ಜೀವಿ ನಾ ಇರ್ಲ್ ಹೊತ್ತು ಕೆರೆನ ಸುತ್ತ ನೋಡ್ದನ ನೀ?
29. ಪಚ್ಚೆ ಸೀರೆ ಉಟ್ಟುಟು, ಚಿನ್ನದ ಗೆಜ್ಜೆ ಹಾಕಿಟು, ನೆಲಲಿ ಮೊಟ್ಟೆ ಇಸಿಟು
30. ತೋಟ ಇಡೀ ಸುತ್ತಿ ಮೇದದೆ, ಸಗ್‌ಣಿ ಹಾಕುದ್ಲೆ
31. ಹಲ್ಲಿಲ್ಲದ ಹಕ್ಕಿ, ಅದರ ತುಪ್ಪಕ್ಕೆ ಜಿಡ್ಡ್ ಇಲ್ಲೆ
32. ಬಾಗ್‌ಲ್ ಮೂಲೆಲಿ ಅಜ್ಜಿ ಕುದ್ದುಟು
33. ತೋಡುಲಿ ನೀರ್ ಆರಿಕಾನ ಚಾಕಟೆ ಹಕ್ಕಿ ಸತ್ತದೆ
34. ಮೊಡ್ಚಿಕೆ ಆಗದ ಮಂದ್ರಿ
35. ಹೋಕನ ಮೂರ್ ಜನ, ಬಾಕನ ಒಂದೇ ಜನ

---

ಉತ್ತರ :

1. ನೆರಳ್ 2. ದ್ರಾಕ್ಷಿ 3. ಒನಕೆ 4. ಕಬ್ಬು 5. ಬೊಂಡ 6. ಲವಂಗ 7. ಉಪ್ಪು 8.ಕೂದಲ್ 9. ಜೋಳ 10. ಕೂಳಿಗೆ ಬಿದ್ದ ಮೀನ್. 11. ತೆಂಗಿನಕಾಯಿ 12. ಹಲ್ಸ್‌ನ ತೊಳೆ 13. ಜರಡಿ 14. ನೀರುಳ್ಳಿ 15. ಗೇರ್‌ಬೀಜ 16. ಪಾವು, ಸೇರ್ 17. ಹಲ್ಸ್‌ನ ಹಣ್ಣ್ 18. ಕುಂಬಳಕಾಯಿ 19.ಅಂಗಿ 20. ಬಾಳೆಗೊನೆ 21. ಜೋಡು 22.ಹುತ್ತ 23. ಬಾಳೆಲೆ 24. ಭೂಪಟ 25. ಗಾಣ. 26. ಬೆಣ್ಣೆ 27. ದೀಪ 28. ಕಪ್ಪೆ 29. ನೆಲಗಡಲೆ 30.ಕುಡುಗೋಲು 31. ಕೋಳಿ 32 ಮಾಯಿಪು 33. ಸೀಮೆಣ್ಣೆ ಬುಡ್ಡಿ 34. ಆಕಾಶ 35.ಎಲೆ, ಅಡಿಕೆ, ಸುಣ್ಣ

---

✍ಸಂಗೀತ ರವಿರಾಜ್

ಹೊಸೂರು,
ಚೆಂಬು,
ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ.

# 'ಸಫಲ' ಕುರ್ತ್

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ದಿನಾಂಕ 15–12–2011ರಲ್ಲಿ ರಾಜ್ಯದ ರಾಜ್ಯಪಾಲರ ಹುಕುಂ ಮೇರೆ ಸ್ಥಾಪನೆ ಆಗಿ ಕೊಡಗಿನ ಕೇಂದ್ರ ಸ್ಥಾನವಾದ ಮಡಿಕೇರಿಲಿ ಅಕಾಡೆಮಿಯ ಕಛೇರಿ ತೆರೆಯಲ್ಪಟ್ಟು ಸಾಹಿತಿಗಳಾದ ಶ್ರೀ ಎನ್.ಯಸ್. ದೇವಿಪ್ರಸಾದ್‌ನವುರ ಅಧ್ಯಕ್ಷತೇಲಿ ಕೆಲವೇ ತಿಂಗಳಕಾಲ ಸಭೆ ನಡ್‌ದ್ ರಾಜ್ಯ ಚುನಾವಣೆನ ನೀತಿ ಸಂಹಿತೆ ಜಾರಿಯದ್‌ದರಿಂದ ಅಕಾಡೆಮಿ ಕೆಲ್ಸ ನಿಲ್ಸಿತ್. ಆ ಮೇಲೆ 2014 ರ ಸಾಲ್‌ಲಿ ಶ್ರೀ ಡಿ.ವಿ. ಸದಾನಂದ ಗೌಡರ್ ರಾಜ್ಯದ ಮುಖ್ಯಮಂತ್ರಿ ಆಗಿರ್‌ಕನ ವಿಧಾನ ಸಭೆ ಮಾಜಿ ಅಧ್ಯಕ್ಷರ್ ಹಂಗೆನೇ ಹಾಲಿ ವಿರಾಜಪೇಟೆ ತಾಲೋಕಿನ ಶಾಸಕರಾದ ಶ್ರೀ ಕೊಂಬಾರನ ಬೋಪಯ್ಯನವರ ಸಹಕಾರಂದ ದಿನಾಂಕ 08–09–2014 ರಂದ್ ಅಕಾಡೆಮಿಯ ಹೊಸ ಅಧ್ಯಕ್ಷರಾಗಿ ಶ್ರೀ ಕೊಲ್ಯದ ಗಿರೀಶ್‌ನವು ಹಳೇ ಅಧ್ಯಕ್ಷ ಶ್ರೀ ಎನ್.ಯಸ್. ದೇವಿಪ್ರಸಾದ್‌ರವರ್‌ಂದ ಅಧಿಕಾರ ಸ್ವೀಕರಿಸಿದೊ. ಹಂಗೆನೇ ಇನ್ನಿತರ 13 ಜನ ಸೇರಿಸಿಕಂಡ್ ಆಡಳಿತ ಮಂಡಳಿ ರಚನೆ ಆತ್. ಈ 14 ಜನರಲ್ಲಿ ಎಲ್ಲವೂ ಎತ್ತಿದ ಕೈಗಳೇ. ಸಾಹಿತಿಗ, ಪ್ರಾಧ್ಯಾಪಕರ್, ವಕೀಲರ್, ನಾಟಕಕಾರರ್ ಮತ್ತೆ ಪತ್ರಕರ್ತರ್ ಹಿಂಗೆ ಎಲ್ಲವೂ ಘಟಾನುಘಟಿಗಳೇ. ಅವರ ಜೊತೆಗೆ 3 ಜನ ಮಹಿಳಾ ಸಿಬ್ಬಂದಿ ವರ್ಗದವು. ಎಲ್ಲವೂ ಜವಾಬ್ದಾರಿಕೆಂದ ಕೆಲಸ ಮಾಡುವವೇ.

ಈ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ 08–09–2014 ರ್‌ಂದ 13–08–2017ರವರೆಗೆ ಮೂರು ವರ್ಷಗಳ ಕಾಲ ಒಂದಲ್ಲ ಒಂದು ಮಹತ್ವದ ಕಾರ್ಯಕ್ರಮಗಳ್ನ ಹಮ್ಮಿಕಂಡ್ ಜನಸಾಗರದ ಸಹಕಾರ ತಕ್ಕಂಡ್ ಕಾರ್ಯಕ್ರಮಗಳ್ನ ಸೋಲು ಇಲ್ಲದೆ ನಡಿಸಿಕೊಟ್ಟದ್ ಒಂದು ಹೆಮ್ಮೆಯೆ. ಶುರುಗೆ ಭಾರತದ ದಕ್ಷಿಣ ಕಾಶಿಂತ ಕರೆವ ಕಾವೇರಿಯ ಉಗಮ ಸ್ಥಳವಾದ ತಲಕಾವೇರಿಲೀ ತುಲಾ ಸಂಕ್ರಮಣ ಎಂದರೆ ತಾ. 17–11–2014 ರಂದ್ ತೀರ್ಥ ಉಕ್ಕಿ ಬರುವ ಕಾರ್ಯಕ್ರಮನ ಆಕಾಶವಾಣಿ ಮೂಲಕ ಪ್ರಚಾರ ಮಾಡುವ ಪ್ರಯೋಜಕತ್ವ ವಹಿಸಿಕಂಡೊ. ಶ್ರೀ ಕಾವೇರಿ ಮಾತೆಯ ಆಶೀರ್ವಾದವೇ ಮುಂದೆ ಎಲ್ಲಾ ಕಾರ್ಯಕ್ರಮಗ ಜಯಶೀಲ ಆಕೆ ಮೂಲ ಕಾರಣ. ಈ ಅರೆಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಮೂರು ವರ್ಷಗಳ ಕಾಲ

ಕರ್ನಾಟಕದ ಉದ್ದಗಲಕ್ಕೂ ಹಳ್ಳಿಯಿಂದ ಹಿಡ್‌ದ್ ಉತ್ತರದ ದಿಲ್ಲಿಯವರೆಗೆ ಸುಮಾರ್ 85 ಕಾರ್ಯಾಕ್ರಮಗಳ್ನ ನಡಿಸಿಕೊಟ್ಟದ್ದ್ ವಿಶೇಷವೇ. ಈ ಸಫಲ ಹೊತ್ತಿಗೆನ ಅವಲೋಕನ ಮಾಡಿರೆ ಅಧ್ಯಕ್ಷರ್ ಮತ್ತೆ ಆಡಳಿತ ಮಂಡಳಿನವು ಹಂಗೆನೇ ಸಿಬ್ಬಂದಿ ವರ್ಗದವು ಎಷ್ಟೊಂದು ಜವಾಬ್ದಾರಿಕೆ ತಕ್ಕಂಡ್ ಕೆಲಸ ಮಾಡಿಯಾಳೊಂತ ಗೊತ್ತಾದೆ. "ಮನಸ್ಸಿದ್ದರೆ ಮಾರ್ಗ"ಂತ ಹೇಳುವಂಗೆ ಅಕಾಡೆಮಿ ಭಾಷೆಯ ಪ್ರಚಾರಕ್ಕೆ ಇಷ್ಟೊಂದು ಕಾರ್ಯಕ್ರಮಗಳ್ನ ಏರ್ಪಾಡ್ ಮಾಡಿದ್ದ್ ಹೆಮ್ಮೆಯ ಸಂಗತಿ. 15-12-2011 ರಂದ್ ಅರೆಭಾಷೆ ಅಕಾಡೆಮಿ ಸ್ಥಾಪನೆ ಆದ ದಿನ ಎಂದರೆ ಡಿಸಂಬರ್ ಹದ್ನೈದನೇ ದಿನಸಾ ಸೌಹಾರ್ದ ದಿನಂತ ಹೇಳಿ ಪ್ರತಿವರ್ಷ ಆಚರಿಸುದು ಒಂದು ಒಳ್ಳೆಯ ವೇದಿಕೆ. ಆದರೆ ಅದ್ ಒಂದು ದಿನಕ್ಕೆ ಮಾತ್ರ ಸಿಮೀತ ಆಗದೆ ಪ್ರತಿನಿತ್ಯನೂ ಅರೆಭಾಷೆ ಮಾತಾಡುವವರ ಸೌಹಾರ್ದತೆ ಆಕು.

ಈ ಅಕಾಡೆಮಿಗೆ ತನ್ನದೆ ಆದ ಸ್ವಂತ ವೆಬ್‌ಸೈಟ್‌ನ ತಾ. 03-11-2014 ರಂದ್ ಮಡಿಕೇರಿಯ ಗಾಂಧಿ ಮೈದಾನಲಿ ರಾಜ್ಯದ ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಸಿದ್ಧರಾಮಯ್ಯನವು ಲೋಕಾರ್ಪಣೆ ಮಾಡ್‌ದ್ ವಿಶೇಷವೇ. ಈ ಮೂರು ವರ್ಷಗಳ ಕಾಲಾವಧಿಲಿ ಅರೆಭಾಷೆ ಸಾಹಿತಿಗ ಅರೆಭಾಷೆಲೇ ಕವನ, ಜೀವನ ಚರಿತ್ರೆ, ವಿಚಾರ ಸಾಹಿತ್ಯ, ನಾಟಕ, ಕಾದಂಬರಿ ಮತ್ತೆ ಸಾಂಪ್ರದಾಯಕ ವಿಷಯಗಳ ಬಗ್ಗೆ ಸುಮಾರ್ 16 ಪುಸ್ತಕಗಳ ಬರೆದ್ ಅಕಾಡೆಮಿಂದ ಬುಡುಗಡೆ ಆದ್ ಹೆಮ್ಮೆಯ ಸಂಗತಿ. ಹಂಗೆನೇ ಸಾಹಿತಿಗಳನ್ನೆಲ್ಲರನ್ನು ಅಕಾಡೆಮಿಂದ ಸನ್ಮಾನಿಸಿದೊ. ಇದ್ ಮುಂದಿನ ಕಾಲಾವಧಿಗೆ ದಾರಿದೀಪ ಇದ್ದ ಹಂಗೆ. ನಾನ್ ಸಹ "ಬೆಳ್ಳಿ ಮುಷ್ಠಿಂತ" ಹೇಳುವ ಪುಸ್ತಕನ ಬರ್‌ದೊಳೆ. ಹಂಗೆನೇ ಒಂದೆರಡ್ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಅಕಾಡೆಮಿನ ಪ್ರಸಂಶೆಗೆ ಪಾತ್ರನಾಗೊಳೆ. ಅಕಾಡೆಮಿಯ ಮೂಲಕ ಅರೆಭಾಷೆಲೀ ತ್ರೈಮಾಸಿಕ "ಹಿಂಗಾರ"ಂತ ಹೇಳುವ ಪುಸ್ತಕ ಬುಡುಗಡೆ ಆದ್ ಸಂತೋಷದ ಸಂಗತಿ. ನಾನ್ ಸಹ ಈ ಪುಸ್ತಕದ ಖಾಯಂ ಸದಸ್ಯನೂ ಹೌದು.

ಈ ಅಕಾಡೆಮಿ ವತಿಂದ ಅರೆಭಾಷೆ ಮಾತಾಡುವವರ ಸಂಸ್ಕೃತಿ, ಸಾಹಿತ್ಯ, ಸಂಪ್ರದಾಯ, ಆಚಾರ ವಿಚಾರಕ್ಕೆ ಸಂಬಂದಪಟ್ಟ, ಹಬ್ಬ ಹರಿದಿನಗಳನ್ನು ಆಚರಿಸುವ ಕ್ರಮ, ಊಟ ತಿಂಡಿಗಳನ್ನು ತಯಾರಿಸುವ ಕ್ರಮ, ಕೋಲಾಟ, ಬಯಲಾಟ, ನೃತ್ಯ, ಕ್ರೀಡೆ, ಕೆಸರ್‌ಗದ್ದೆಲಿ ಓಡುದು ಮುಂತಾದ ಹಲವಾರ್ ಕಾರ್ಯಕ್ರಮಗಳನ್ನು ಊರು, ಕೇರಿ, ರಾಜ್ಯ, ದೇಶಲಿ, ಮನಮುಟ್ಟುವ ಹಂಗೆ

ಪರಿಚಯ ಮಾಡಿಕೊಟ್ಟದ್ ಅದ್ಭುತವೇ.

ಭಾಷೆಂತ ಹೇಳ್ದು ಆಯಾಯಾ ಜನಾಂಗದವರ ಮಾತೃ ಭಾಷೆ (ತಾಯಿಭಾಷೆ) ನಾವೆಲ್ಲವೂ ಅವರವರ ಅವ್ವನ (ತಾಯಿಯ) ಕರುಳಿಂದ ತುಂಡಾಗಿ ಬಂದವು. ಅದರ್‌ಂದ ಸಾಹಿತಿ ಶ್ರೀ ಹಂಪನಾಗರಾಜಯ್ಯನವು ಹೇಳುವಂಗೆ ಅವ್ವನ ಭಾಷೆ ಕರುಳಿನ ಭಾಷೆ. ಬೇರೆ ಭಾಷೆಗ ಕೊರಳಿನ ಭಾಷೆ. ಎಂದರೆ ಬೇರೆ ಭಾಷೆಗ ನಮ್ಮ ಕೊರಳ್‌ಂದ ಇತ್ತ ಮಾತ್ರ. ಹೊಟ್ಟೆ ಒಳಗೆ ಇಲ್ಲೆ. ಹೊಟ್ಟೆ ಒಳಗಿಂದ ಬಾದು ನಮ್ಮ ತಾಯಿ ಭಾಷೆ. ಆದರೆ ಬೇರೆ ಭಾಷೆಗಳನ್ನ ಪ್ರೀತಿಸೊಕು. ದೂಷಣೆ ಮಾಡಿಕೆ ಆಗದ್.

ನಾನ್ ಈ ಸಂದರ್ಭಲೀ ಒಂದು ಮಾತ್ ಹೇಳ್ದು ಎಂತಂತ ಹೇಳಿರೇ ಅವರವರ ಮನೆಗಳಲೀ ಹೆತ್ತವು ತಮ್ಮ ಮಕ್ಕಳೊಟ್ಟಿಗೆ ಅವರವರ ತಾಯಿ ಭಾಷೆಲೇ ಮಾತಾಡೊಕು. ಹಂಗೆ ಆದರೆ ಮಾತ್ರ ತಾಯಿ ಭಾಷೆ ಬೆಳೆಯಕ್ಕೆ ಸಾಧ್ಯ ಆದೆ.

ಪ್ರಸ್ತುತಃ ಅಕಾಡೆಮಿಯ ಅಧ್ಯಕ್ಷರ್ ಮತ್ತೆ ಆಡಳಿತ ಮಂಡಳಿಯವು ಅರೆಭಾಷಿಕರ ಆಚಾರ ವಿಚಾರ, ಸಂಸ್ಕೃತಿ ಸಾಹಿತ್ಯಕ್ಕೆ ಒತ್ತುಕೊಟ್ಟ್ ಇನ್ನಷ್ಟ್ ಕಾರ್ಯಕ್ರಮಗಳನ್ನ ಹಮ್ಮಿಕಂಡ್ ಕೆಲಸ ಮಾಡಿಕೆ ದೇವರ ಆಶೀರ್ವಾದ ಇರಲೀಂತ ಹೇಳಿಕೆ ಬಯಸಿನೆ.

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯ ಮಾಜಿ ಅಧ್ಯಕ್ಷರೂ ಮತ್ತು ಆಡಳಿತ ಮಂಡಳಿ ಹಾಗೂ ಸಿಬ್ಬಂದಿ ವರ್ಗದವು ಕಳೆದ ಮೂರು ವರ್ಷಗಳ ಕಾಲದ ಸಾಧನೆಗ ಸಫಲಗೊಂಡದಕ್ಕೆ ಅಭಿನಂದನೆಗ.

✍ಕಟ್ರತನ ಕೆ. ಬೆಳ್ಯಪ್ಪ

ವಿಶ್ರಾಂತ ಅಧ್ಯಾಪಕ
ಬಲಮುರಿ ಗ್ರಾಮ ಮತ್ತು ಅಂಚೆ
ಕೊಡಗು
ಮೊ : 8197663328

## ಹೊಸ ರುಚಿ

**1. ಅಳುಂಬು ಪಲಾವ್:**

ಎರಡ್ ಹಿಡಿಯಷ್ಟ್ ಅಳುಂಬುಗೆ ಒಂದ್ ಪಾವ್‌ನಷ್ಟು ಅಕ್ಕಿ ಬೇಕಾದೆ.

**ಬೇಕಾಗುವ ಸಾಮಾನ್ :** 1/4 ಗಡಿ ತೆಂಗ್ನಕಾಯಿ, ನಾಕ್ ಹಸಿ ಮೆಣ್ಸ್, ಒಂದು ನೀರುಳ್ಳಿ, ಮೂರು ಸಿಗಳ್ ಬೆಳ್ಳುಳ್ಳಿ. ಸಣ್ಣ ತುಂಡು ಶುಂಠಿ, ಕೆತ್ತೆ, ಲವಂಗ, ಸಪ್ಸಿಗೆ, ಪುದೀನ, ಸಂಬಾರ ಸೊಪ್ಪು, ಎರಡ್ ಟೊಮೇಟೊ. ಅದಿಲ್ಲರೆ ಒಂದಿಷ್ಟ್ ಉಣ್ಸೊಳಿ. ಅದರ್ನೆಲ್ಲಾ ಸೇರ್‌ಸಿ ಮಿಕ್ಸಿ ಮಾಡೊಕು.

**ಪಲಾವ್ ಮಾಡುವ ರೀತಿ :** ಅಡುಗೆ ಎಣ್ಣೆಗೆ ನಾಕಾರ್ ಲವಂಗ, ಪಟ್ಟೆ ಹಾಕಿ ಅದ್ ಕಾದಂಗೆ ಮಿಕ್ಸಿ ಮಾಡಿಕಂಡ ಮಸಾಲೆ ಹಾಕೊಕು. ಅಳತೆಗೆ ತಕ್ಕ ನೀರ್ ಹಾಕಿ, ರುಚಿಗೆ ತಕ್ಕ ಉಪ್ಪು ಹಾಕೊಕು. (ಈಗನ ನಿಯಮ ಪ್ರಕಾರ ಒಲೆಂದ ಇಳ್ಸಿದ ಮೇಲೆ ಉಪ್ಪು ಹಾಕಿರೆ ಅದರ್ಲಿರುವ ಅಯೋಡಿನ್ ಅಂಶ ಹಂಗೇ ಇದ್ದದೆ) ಅದ್ ಕೊದ್ದ ಮೇಲೆ ಅಳುಂಬು ಮತ್ತೆ ಅಕ್ಕಿ ಹಾಕಿ ತಿರ್‌ಗಿಸೊಕು. ಕುಕ್ಕರ್ ಎರಡ್‌ದಪ ಸೀಪುಳು ಹಾಕಿದ ಮೇಲೆ ಸ್ಟವ್‌ಂದ ಇಳ್ಸಿ. ಕುಕ್ಕರ್‌ದ್ ಒತ್ತಡ ಕಮ್ಮಿ ಆದ ಮೇಲೆ ಮುಚ್ಚೊಳ ತೆಗೆಕು. ಆಗ ಮಸಾಲೆ ಪಲಾವ್ ಮೇಲೆ ಬಂದಿದ್ದದೆ. ಅದರ್ನ ಚಮ್ಚುಂದ ಲಾಯ್ಕ ತಿರ್‌ಗಿಸಿ ಮಿಶ್ರ ಮಾಡೊಕು. ಕಾದ್‌ಕಂಡ್ ಕುದ್ದ ಮಕ್ಕಳಿಗೆ ಉಂಬಕೆ ಇಕ್ಕಿ. ಆಹಾ! ಅವ್ವಾ ಇನ್ನೊಮ್ಮೆ ಯಾಗ ಮಾಡಿಯವ್ವಾತ ಮಕ್ಕ ಕೇಳದೆ ಇರಿಕಿಲೆ.

✍ಕೆ.ಎಸ್. ಭಾರತಿ

ಬಾರಿಯಂಡ ಮನೆ,
ಮದೆ ಗ್ರಾಮ ಮತ್ತೆ ಅಂಚೆ,
ಮಡಿಕೇರಿ ತಾಲೂಕು
ಕೊಡಗು ಜಿಲ್ಲೆ.

## <u>2. ಚಂಗುಳಿ:</u>

<u>**ಬೇಕಾಗುವ ಸಾಮಾನ್ :**</u> ಬಕ್ಕೆ ಹಲ್ಸ್‌ನ ಕಾಯಿದ್ ಇಪ್ಪತ್ತೈದ್ ತೊಳೆ. ಹತ್ತ್ ಹದ್ನೈದ್ ಅದರ ಬೀಜ. ತರಕಾರಿ ಗೈಪಿಗೆ ಯಾವ್ದೆಲ್ಲಾ ಮಸಾಲೆ ಹಾಕುವೆನೊ ಆಯೆಲ್ಲಾ ಸಾಮಾನ್‌ಗಳ ಮಿಕ್ಸಿ ಮಾಡಿಕಣಿ.

<u>**ಮಾಡುವ ವಿಧಾನ :**</u> ಹಲ್ಸ್‌ನ ತೊಳೆನ ನಾಕ್ ಸೀಳ್ ಮಾಡೊಕು. ಹಲ್ಸ್‌ನ ಬೀಜದ ಮೇಲೆದ್ ತೊಪ್ಪೆ ತೆಗೆಕು. ಆ ತೊಪ್ಪೆ ತೆಗ್ದಂಗೆ ಒಳಗೆ ಇನ್ನೊಂದು ತೆಳ್ಳಂಗಿರುವ ಪೊರೆ ಇದ್ದದೆ. ಅದರ ಕೆರ್ದ್ ತೆಗೆಕು. ತೊಳೆ ಮತ್ತೆ ಬೀಜನ ಬೇಸಿಕಣೊಕು. ಮಸಾಲೆ ಹಂಞ ಈ ಪಜ್ಜಿಯಷ್ಟ್ ಗಟ್ಟಿ ಇರ್‌ಲಿ. ಅಡುಗೆ ಎಣ್ಣೆ ಕಾಯಕೆ ಇಸಿ. ಎಣ್ಣೆ ಕಾದಂಗೆ ಸಾಸಿವೆ, ಒಗ್ರಣೆ ಸೊಪ್ಪು, ನಾಕೈದ್ ಸಿಗಳ್ ಬೆಳ್ಳುಳಿನ ಕುಟ್ಟಿ ಹಾಕಿ. ಅದೆಲ್ಲಾ ಫ್ರೈ ಆದ ಮೇಲೆ ಮಸಾಲೆ ಹಾಕಿ ತಿರ್ಗ್ಸಿ. ನೀರ್ ಹಾಕ್‌ಬಡಿ. ಈಗ ಬೇಸಿಕಂಡ ಹಲ್ಸ್‌ನ ತೊಳೆ ಮತ್ತೆ ಹಲ್ಸ್‌ನ ಬೀಜನ ಆ ಮಸಾಲೆಗೆ ಹಾಕಿ. ಒಲೆಂದ ಇಳ್ಸಿ ರುಚಿಗೆ ತಕ್ಕಷ್ಟ್ ಉಪ್ಪು ಹಾಕಿ ತಿರ್ಗ್ಸಿ. ಅದ್ ಮರಗೆಣ್ಸ್‌ದ್ ಉಪ್ಪುಕರಿ ಇದ್ದಂಗೆ ಇದ್ದದೆ. ಈಗ ಲಗಾಯಿಸಿ. ತಿಂದ್‌ಕಂಡಿದ್ದಂಗೆ ಬಕ್ಕೆ ಕಾಯಿ ಇನ್ನೊಂದುಟ್ಟು ಪುನಾ ಚಂಗುಳಿ ಮಾಡೊಕುತ ಗ್ಯಾನ ಮಾಡದಿರಿಕಿಲೆ.

✍ದಿವ್ಯ ಜಯಪ್ರಕಾಶ್,

ಬಳ್ಳಡ್ಕ ಮನೆ,
ಉಬರಡ್ಕ, ಮಿತ್ತೂರು,
ಸುಳ್ಯ, ದ.ಕನ್ನಡ ಜಿಲ್ಲೆ.

### ಆಟಿ ಕೋಳಿ

ಕೊಡಗ್‌ಲಿ ಆಟಿ ತಿಂಗತ್ತೇಳ್‌ರೆ
ಮೈ ನಡ್‌ಗುವ ಸಳಿಕಾಲ.
ಆಗ ನಾಟಿ ಕೋಳಿ ಗೈಪು ಮಾಡಿ ತಿಂದರೆ
ಮೈ ಪೂರ ಬಿಸಿಯಾದೆತ
ಹಿರಿಯವು ಮಾಡಿ ತೋರ್ಸಿಯೊಳೊ.
ಹಂಗೆ ನಾವೂ ಮಾಡ್ತೊಳೊ.

# ಶುಭ ಹಾರೈಕೆ

ಮಾನ್ಯರೆ,

ಬೇವು ಬೆಲ್ಲದ ಮುಖ ಪುಟದೊಂದಿಗೆ ಬಂದ ಈ ಹಿಂದೆನ ಸಂಚಿಕೆ ತುಂಬಾ ಲಾಯ್ಕಲಿ ಅರ್ಳಿ ಬಂದುಟು. ಮಾಡ್ದ ಕಾರ್ಯಕ್ರಮಗಳ ಚಿತ್ರಂಗಳ ಹಿಡ್ದ್, ಬರ್ದ ಬರಹಗೆಲ್ಲ ಅರೆಭಾಷೆನ ಗತ್ತ್‌ನ ಎತ್ತಿ ಹಿಡಿವಂತದ್. ವ್ಯಕ್ತಿ ಪರಿಚಯನ ಸೊಗಸಾಗಿ ನಿರೂಪಣೆ ಮಾಡ್ಯೊಳೊ. ಸಂಪಾದಕರಿಗೆ ನನ್ನದೊಂದು ಕೋರಿಕೆ ಏನ್ತ್‌ತೇಳ್ರೆ ಸಂಚಿಕೆನ ಬರೇ ಅರೆಭಾಷಿಕರಿಗೆ ಮಾತ್ರ ಕಳ್ಸದೆ ಉಳ್ದ ಎಲ್ಲ ಭಾಷಿಕರ ಸ ಚಂದಾದಾರರಾಗಿ ಮಾಡಿ ಎಲ್ಲವುಕೆ ಕಳ್ಸುವ ಪ್ರಯತ್ನ ಮಾಡೊಕು. ಕನ್ನಡ ಲಿಪಿ ಇರ್ದೊರ್‌ಂದ ಓದಿಕೆ ಯಾವ ಭಾಷಿಕರಿಗೆ ಸ ತೊಡಕಿಲ್ಲೆತ ನನ್ನ ಅನಿಸಿಕೆ. ಪ್ರತಿಭಾವಂತ ಅಧ್ಯಕ್ಷರ್ ಮತ್ತೆ ಸದಸ್ಯರ್‌ಂದ ಕೂಡ್ದ ಈ ತಂಡ ಹಿಂಗಾರ ಸೇರ್ದಂಗೆ ಉಳ್ದ ಕಾರ್ಯಕ್ರಮಗಳ ಸ ಲಾಯ್ಕಲಿ ಮಾಡಿಕಂಡ್ ಹೋಗಲಿತ ಶುಭ ಹಾರೈಸಿನೆ.

✍ಸಂಗೀತ ರವಿರಾಜ್, ಹೊಸೂರು

ಮಾಜಿ ಸದಸ್ಯೆ,
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

*ನಿಮ್ಮ ಕೋರಿಕೆಗೆ ಧನ್ಯವಾದಗ. ನೀವ್ ಹೇಳ್ದಂಗೆ ಅನ್ಯ ಭಾಷಿಕರೂ ಚಂದಾದಾರರಾಗ್ತಾ ಒಳೊ.*
*ಹಿಂಗಾರ ಈಗ ಎರ್ಡ್‌ಪಟ್ಟ್ ಜಾಸ್ತಿ ಪ್ರಿಂಟಾಗ್ತಾ ಉಟ್ಟು.*
✍ಸಂ.

# ಅಕಾಡೆಮಿನ ಹೊಸ ಸದಸ್ಯ



ಹೆಸ್ರ್ : ಶ್ರೀ ದಿನೇಶ್ ಹಾಲೆಮಜಲು (ದಯಾನಂದ)
ಅಪ್ಪ : ದಿ. ಯು.ಡಿ. ಮಂಜುನಾಥ ಗೌಡ
ಅವ್ವ : ಶ್ರೀಮತಿ ಭುವನೇಶ್ವರಿ
ಮನೆ : ಹಾಲೆಮಜಲು
ಗ್ರಾಮ : ನಾಲ್ಕೂರು
ತಾಲೂಕು: ಸುಳ್ಯ
ಜಿಲ್ಲೆ : ದಕ್ಷಿಣ ಕನ್ನಡ
ಮೊ : 9448981963, 08257-282179

ಹವ್ಯಾಸ : ಪತ್ರಿಕಾ ವರದಿಗಾರಿಕೆ, ಸಾಮಾಜಿಕ ಸೇವೆ, ಆದರ್ಶ ಯೂತ್ ಕ್ಲಬ್‌ಲಿ ಮಾಧ್ಯಮ ಪ್ರತಿನಿಧಿಯಾಗಿ ಸೇವೆ, ಕರ್ನಾಟಕ ಅರಣ್ಯ ಇಲಾಖೆಯ ಸುಬ್ರಹ್ಮಣ್ಯ ಅರಣ್ಯ ಇಲಾಖೆಯ ಗ್ರಾಮ ಅರಣ್ಯ ಸಮಿತಿ ನಾಲ್ಕೂರು ಇದರಲ್ಲಿ ಹತ್ತು ವರುಷ ಅಧ್ಯಕ್ಷರಾಗಿ ಸೇವೆ, ಗುತ್ತಿಗಾರು ಸರಕಾರಿ ಶಾಲೆಯಲ್ಲಿ ಚಿಣ್ಣರ ಮನೆ ಅಧ್ಯಕ್ಷರಾಗಿ ಪ್ರಸ್ತುತ ಸೇವೆ. ವಿಜಯ ಬ್ಯಾಂಕ್ ಪ್ರವರ್ತಕ. ವಿಜಯ ಪ್ರತಿಷ್ಠಾನ ನಾಲ್ಕುರು ಇದರ ಕಾರ್ಯದರ್ಶಿ, ಸುಬ್ರಹ್ಮಣ್ಯ ಕಾರ್ಯನಿರತ ಪತ್ರಕರ್ತರ ಸಂಘದ ಕಾರ್ಯದರ್ಶಿ, ಸುದ್ದಿ ಬಿಡುಗಡೆ ಸುಳ್ಯ ಇದರಲ್ಲಿ ಗೌರವ ವರದಿಗಾರರಾಗಿ ಸೇವೆ, ಕರ್ನಾಟಕ ಮಾಹಿತಿ ಹಕ್ಕು ಆಯೋಗಲಿ ಕಾರ್ಯಕರ್ತರಾಗಿ ಸೇವೆ. ನಾಲ್ಕೂರು ಗ್ರಾಮ ವಲಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ ಸೇವೆ.

ಉತ್ತರ ಕನ್ನಡ ಜಿಲ್ಲೆಯ ಸಿರಸಿಲಿ ಅರಣ್ಯ ಪರಿಸರ ತರಬೇತಿ ಪಡ್ದೊಳೊ. ಕೃಷಿ ತರಬೇತಿಯಲ್ಲಿ ಸಕ್ರಿಯ ಉಪನ್ಯಾಸಕರಾಗಿ, ಮಾಹಿತಿ ನೀಡಿಕೆಗಾರರಾಗಿ, ಹಿಂಗೆ ಸಮಾಜ ಸೇವೆ ಮಾಡ್ತೊಳೊ.

* * * * *

(ವರದಿ)

## ಮಡಿಕೇರಿಲಿ ನಡ್ದ ಸಾಹಿತ್ಯ ಶಿಬಿರ ಮತ್ತ್ ಸಂವಾದ ಕಾರ್ಯಕ್ರಮ

ಕೊಡಗ್‌ಲಿರುವ ಮೌಖಿಕ ಸಾಹಿತ್ಯನ ದಾಖಲು ಮಾಡಿರೆ ವಿಶ್ವದ ಶ್ರೇಷ್ಠ ಸಾಹಿತ್ಯ ಆಗುವ ಸಾಧ್ಯತೆ ಉಟ್ಟ್. ಈ ಕೆಲ್ಸಕೆ ಮುಂದಾಕುತ ಸಾಹಿತಿ ಅಬ್ದುಲ್ ರಶೀದ್ ಅವು ಕರೆಕೊಟ್ಟೊ.

24-06-2018ರಂದ್ ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, ಕರ್ನಾಟಕ ಅರೆಭಾಷೆ ಮತ್ತು ಸಾಹಿತ್ಯ ಅಕಾಡೆಮಿ ಹಾಗೂ ಕೊಡಗು ಜಿಲ್ಲಾ ಲೇಖಕ ಮತ್ತೆ ಕಲಾವಿದರ ಬಳಗದ ವತಿಂದ ಮಡಿಕೇರಿಲಿರುವ ದೇವರಾಜ ಅರಸು ಭವನಲಿ ನಡ್ದ ಸಾಹಿತ್ಯ ಶಿಬಿರ ಮತ್ತೆ ಸಂವಾದ ಕಾರ್ಯಕ್ರಮಲಿ ರಶೀದ್ ಅವು ಮಾತಾಡ್ದೊ.

ಮಕ್ಕಳಿಗೆ ಇಂದ್ ಬಯ್ಲ್, ನದಿ ನೋಡಿಕೆ ಸಾಧ್ಯ ಇಲ್ಲದಾಗುಟು. ಎಲ್ಲಾ ಕಡೆ ಬೇಲಿ. ಇಂದ್ ಕೊಡಗು ಸನ ಬದಲಾಗ್ತಾ ಉಟ್ಟ್. ಆರ್ ವರ್ಷ ಕೊಡಗ್‌ನ ಹಳ್ಳಿಗಳ ಸುತ್ತಿಯೊಳೆ. ಕೊಡಗ್‌ನಷ್ಟ್ ಸಾಹಿತ್ಯ ಶ್ರೀಮಂತಿಕೆ ಇರುವ ಪ್ರದೇಶ ಪ್ರಪಂಚಲಿ ಬೇರೆ ಇಲ್ಲೆ. ಸಾಹಿತ್ಯತೇಳ್ರೆ ಕೇವಲ ಕೃತಿಗಳ್‌ಲಿರುವ ಅಕ್ಷರಗಲ್ಲ. ಪ್ರಶಸ್ತಿ ಬಂದರೆ ಮಾತ್ರ ಅದ್ ಶ್ರೇಷ್ಠ ಸಾಹಿತ್ಯ ಅಲ್ಲ. ಕೊಡಗ್‌ನ ಹಿರಿಯರ್‌ಲಿರುವ, ಐನ್‌ಮನೆಗಳ್‌ಲಿ ಇರುವ ಸಾಹಿತ್ಯನ ದಾಖಲಿಸಿರೆ ಅದ್ ವಿಶ್ವವಿಖ್ಯಾತಿ ಪಡ್ದದೆ. ಸಾಹಿತ್ಯಕ್ಕೆ ಯಾವ ಭಾಷೆತೇಳ್ದು ಮುಖ್ಯ ಅಲ್ಲ. ಅದರ ದಾಖಲೀಕರಣ ಆಕು. ಹಳ್ಳಿಗಳ್‌ಲಿರುವ ಸಾಹಿತ್ಯ, ಕತೆ, ಹಾಡ್‌ಗಳ್ನ ಸಂಗ್ರಹ ಮಾಡೊಕುತ ಕಿವಿ ಮಾತ್ ಹೇಳ್ದೊ.

ಮತ್ತೊಬ್ಬ ಅತಿಥಿ ಸಾಹಿತಿ ಎಂ.ಎಸ್. ಶಶಿಕಲಾ ಗೌಡನವು ಮಾತಾಡಿ ಸಾಹಿತ್ಯಲಿ ಬದಲಾವಣೆತ್ತೇಳ್ದು ನಿರಂತರ ಪ್ರಕ್ರಿಯೆ. ಬರೀ ಜೀವ ಸಂಕುಲಕ್ಕೆ ಮಾತ್ರ ಅಲ್ಲದೆ ಎಲ್ಲಾ ವಸ್ತುಗ, ಪ್ರಕೃತಿ ಸನ ಬದಲಾವಣೆಗೆ ಒಳಪಟ್ಟದೆ. ಸಾಹಿತ್ಯದ ವಸ್ತುಲಿ, ಭಾಷೆ, ಶೈಲಿಲಿ ಬದಲಾವಣೆನ ಕಾಣಕ್. ಸಾಹಿತ್ಯ ಸಮಾಜಮುಖಿಯಾಗಿ ಕೆಲ್ಸ ಮಾಡೊಕು. ವೈಚಾರಿಕತೆನ ಬಡ್ದ್ ಏಳ್ಸೊಕು. ಗುಲಾಮಗಿರಿಂದ ಹೊರ ಬಾಕೆ ತಿಳಿವಳಿಕೆ ಮೂಡ್ಸೊಕು. ಸಾಹಿತ್ಯ ಆ ಕೆಲ್ಸನ ಸರಿಯಾಗಿ ಕಾಲಂದ ಕಾಲಕ್ಕೆ ಮಾಡಿಕಂಡ್ ಬಂದುಟ್ಟುತ ಹೇಳ್ದೊ.

ಕಾರ್ಯಕ್ರಮನ ಉದ್ಘಾಟಿಸಿದ ಕೊಡಗು ಲೇಖಕ ಮತ್ತೆ ಕಲಾವಿದರ ಬಳಗದ ಅಧ್ಯಕ್ಷ ಕೇಶವ್ ಕಾಮತ್‌ನವು ಮಾತಾಡಿ ಸಾಹಿತಿಗಳ್ನ ಒಂದ್‌ಕಡೆ ಸೇರ್‌ಸುವ ಕೆಲ್ಸ ಪ್ರಶಂಸನೀಯತ ಹೇಳ್ದೊ.

ಮುಖ್ಯ ಅತಿಥಿಗಳಾಗಿದ್ದ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಅಧ್ಯಕ್ಷ ಪಿ.ಸಿ. ಜಯರಾಮನವು ಮಾತಾಡಿ ವಿಭಿನ್ನ ಭಾಷೆಲಿ ಸಾಹಿತ್ಯ ಕೃಷಿ ಆಗುತ್ತುಟ್ಟು. ಎಲ್ಲಾ ಸಾಹಿತಿಗ ದೇಶನ ಕಟ್ಟುವಂತಹ ಕೆಲ್ಸನ ಮಾಡ್ತಾ ಒಳೊ. ಕವಿ ತನ್ನ ಭಾವನೆಗಳ್ನ ಬರವಣಿಗೆ ಮೂಲಕ ಜನಕ್ಕೆ ಪರಿಣಾಮಕಾರಿಯಾಗಿ ಮುಟ್ಟುಸುವ ಶಕ್ತಿ ಹೊಂದಿಟು. ಸಾಹಿತ್ಯ ಕಾಲ ಕಾಲಕ್ಕೆ ಬದಲಾವಣೆ ಕಾಂಬೊಕು.

ಈ ರೀತಿಯ ಶಿಬಿರ ತುಂಬಾ ಒಳ್ಳದ್. ವಿದ್ಯಾರ್ಥಿಗ ಇಂತಹ ಕಾರ್ಯಕ್ರಮಗಳಿಗೆ ತೊಡಗಿಸಿಕಂಬೊಕುತ ಹೇಳ್ಲೊ.

ಅಧ್ಯಕ್ಷತೆ ವಹಿಸಿದ್ದ ಕೊಡವ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಪೆಮ್ಮಂಡ ಕೆ. ಪೊನ್ನಪ್ಪನವು ಮಾತಾಡಿ, ಸಾಹಿತಿಗ ಆಗಾಗ ವಿಚಾರ ವಿನಿಮಯ ಮಾಡಿಕಣೊಕು. ಸಾಹಿತ್ಯಕ್ಕೆ ಅಂತ್ಯ ಇಲ್ಲೆ. ರವಿ ಕಾಣದರ ಕವಿ ಕಂಡದೆಂತ ಮಾತ್ ಉಟ್ಟು. ಸಾಹಿತ್ಯ ಬೆಳವಣಿಗೆಗೆ ಎಲ್ಲವೂ ಕೈ ಜೋಡ್ಸೊಕು. ವಿದ್ಯೆಯೊಂದೇ ಸಾಹಿತ್ಯ ರಚನೆಗೆ ಅರ್ಹತೆಯಲ್ಲ. ಅನುಭವಂದ ಅಪ್ಪಚ್ಚ ಕವಿಯಂತವು ಉತ್ಕೃಷ್ಟ ಸಾಹಿತ್ಯ ರಚ್‌ಸಿದ ಉದಾಹರಣೆ ನಮ್ಮ ಕಣ್ಣ್‌ಮುಂದೆ ಉಟ್ಟುತ ಹೇಳ್ಲೊ.

ಲೇಖಕ ಮತ್ತೆ ಕಲಾವಿದರ ಬಳಗದ ಪ್ರಧಾನ ಕಾರ್ಯದರ್ಶಿ ಮತ್ತೆ ಕೊಡವ ಅಕಾಡೆಮಿ ಸದಸ್ಯ ಐತಿಚಂಡ ರಮೇಶ್ ಉತ್ತಪ್ಪನವು ಪ್ರಾಸ್ತಾವಿಕಾಗಿ ಮಾತಾಡಿ ಕೊಡಗ್‌ಲಿ ಸಾಹಿತ್ಯಾಸಕ್ತರ್ನ ಒಂದ್‌ಕಡೆ ಕೂಡ್ಸುವ ಪ್ರಯತ್ನ ಇದಾಗುಟ್ಟು. ಇಂತಹ ಕಾರ್ಯಕ್ರಮ ನಿರಂತರ ಆಕು. ಇಡೀ ರಾಜ್ಯಲಿ ಪೂರ್ಣ ಪ್ರಮಾಣದ ಪುಸ್ತಕ ಮಾರಾಟ ಮಳಿಗೆ ಇಲ್ಲದ ಏಕೈಕ ಜಿಲ್ಲೆ ಕೊಡಗುತ ಬೇಜಾರಂದ ಮಾತಾಡ್ಲೊ.

ಕೊಡಗು ಜಿಲ್ಲಾ ಲೇಖಕ ಮತ್ತೆ ಕಲಾವಿದರ ಬಳಗದ ನಿಕಟಪೂರ್ವ ಅಧ್ಯಕ್ಷ ಷಂಶುದ್ದೀನ್ ಅವು ಮಾತಾಡಿ ಜಿಲ್ಲೆಲಿ ಬೇಕಷ್ಟ್ ಯುವ ಸಾಹಿತಿಗ ಒಳೊ. ಮುಖ್ಯವಾಗಿ ಶಿಕ್ಷಕರ್ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಕೊಡೊಕು. ಹಲವು ಶಿಕ್ಷಕರಿಗೆ ಸಾಹಿತ್ಯದ ಬಗ್ಗೆ ಅಭಿರುಚಿ ಇಲ್ಲದಿರುದು ಸಮಸ್ಯೆಯಾಗುಟು. ಸ್ಕೂಲ್‌ಗಳ್‌ಲಿ ಗ್ರಂಥಾಲಯ ಇದ್ದರೂ ಅವುಗಳ ಸದ್ಬಳಕೆ ಆಗ್ತಾ ಇಲ್ಲೆತ ಹೇಳ್ಲೊ.

ಸಾಹಿತಿ ಕಾಲೂರು ನಾಗೇಶ ಅವು ಕೊಡವ ಸಾಹಿತ್ಯದ ಪರಿಚಯ ಮಾಡ್ಲೊ. ಕೊಡವ ಜಾನಪದ ಸಾಹಿತ್ಯ ಶ್ರೇಷ್ಠ ಆಗುಟು. ಕೊಡಗ್‌ನ ಬಾಳೋಪಾಟ್, ದೇವಡ ಪಾಟ್, ಶಿಶುಗೀತೆ ಅರ್ಥಪೂರ್ಣ ಆಗುಟ್ಟು. ಕೊಡವ ಗಾದೆಗ ಕೂಡ ಮೌಲ್ಯಯುತ ಆಗುಟುತ ಹೇಳ್ಲೊ.

ಅರೆಭಾಷೆ ಸಾಹಿತ್ಯದ ಬಗ್ಗೆ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಸದಸ್ಯ ಬಾರಿಯಂಡ ಜೋಯಪ್ಪನವು ಮಾತಾಡಿ ಹಲವು ಜನ ಒಳ್ಳ ಸಾಹಿತ್ಯ ರಚನೆ ಮಾಡಿಯೊಳೊ. ಅರೆಭಾಷೆಗೆ ಪ್ರೊ. ಕೋಡಿ ಕುಶಾಲಪ್ಪ ಗೌಡನವು ಲಿಪಿನ ಕಂಡ್ ಹಿಡ್ಡೊಳೊ. ಅರೆಭಾಷೆ ವಿಶೇಷತ್ತೇಳ್ರೆ ಒಂದ್ ಪುಟದಷ್ಟ್ ಬೇರೆ ಭಾಷೆಲಿ ಬರೆದುರ ಈ ಭಾಷೆಲಿ ಅರ್ಧ ಪುಟಲಿ ಬರ್ಯೆಕ್. ಹತ್ತ್ ನಿಮ್ಸಲಿ ಮಾತಾಡ್ದರ ಐದ್ ನಿಮ್ಸಲಿ ಮಾತಾಡಕ್. 1956ರ್‌ಲೇ ವಿದ್ವಾನ್ ಟಿ.ಜಿ. ಮುಡೂರು ಅವು 'ಬೊಳ್ಳಾಕನ ಮುಗ್ತ್'ತ್ತೇಳುವ ಪ್ರಹಸನನ ಬರ್ದೊಳೊ. ಅರೆಭಾಷೆ ಅಕಾಡೆಮಿ ರಚನೆ ಆದಮೇಲೆ ಸುಮಾರ್ ಪುಸ್ತಕ ಪ್ರಕಟ ಆಗುಟುತ ಹೇಳ್ಲೊ.

ಉದ್ಘಾಟನಾ ಸಮಾರಂಭಲಿ ಅಕಾಡೆಮಿ ರಿಜಿಸ್ಟ್ರಾರ್ ಉಮರಬ್ಬನವು ಸ್ವಾಗತಿಸಿದೊ. ಅರೆಭಾಷೆ ಅಕಾಡೆಮಿ ಸದಸ್ಯೆ ಕಡ್ಲೇರ ತುಳಸಿ ಮೋಹನ್‌ನವು ನಿರೂಪಿಸಿದೊ. ಅಕಾಡೆಮಿ ಸದಸ್ಯ ಕಾನೆಹಿತ್ಲು ಮೊಣ್ಣಪ್ಪನವು ವಂದಿಸಿದೊ.

# ಸಣ್ಣ ಭಾಷೆ ರಕ್ಷಣೆಗೆ ಅಕಾಡೆಮಿ ರಚನೆ ಅನಿವಾರ್ಯ

## ಬೇರೆ ಭಾಷೆಗಳ ಪ್ರಭಾವಂದ ಸ್ಥಳೀಯ ಭಾಷೆಗ ಅವನತಿ ಕಡೆಗೆ

ಯರವ, ಕುಡಿಯ, ಪಾಲೆ ಹಿಂಗೆ ಬೇರೆ ಸಣ್ಣ ಭಾಷೆಗಳ ರಕ್ಷಣೆಗೆ ಅಕಾಡೆಮಿ ಸ್ಥಾಪಿಸುವ ಅಗತ್ಯ ಇದ್ದ್, ಅವುಗಳ ಕಡೆಗಣಿಸಿರೆ ಆ ಭಾಷೆಗ ಕಣ್ಮರೆ ಆಗುವ ಅಪಾಯ ಉಟ್ಟುತ ಸಾಹಿತಿ ಕೆ. ಆರ್. ವಿದ್ಯಾಧರನವು ಎಚ್ಚರಿಕೆ ಕೊಟ್ಟೊಳೊ.

ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಅಲ್ಲದೆ ಕೊಡಗು ಲೇಖಕ ಮತ್ತೆ ಕಲಾವಿದರ ಬಳಗದ ಸಂಯುಕ್ತ ಆಶ್ರಯಲಿ ನಡ್ದ ಸಾಹಿತ್ಯ ಶಿಬಿರ ಮತ್ತೆ ಸಂವಾದ ಕಾರ್ಯಕ್ರಮ ಸಮಾರೋಪ ಭಾಷಣ ಮಾಡ್ದ ಅವು "ಮೇಲ್ವರ್ಗದ ಭಾಷೆಗಳ ಒತ್ತಡಂದ ಸಣ್ಣ ಸಣ್ಣ ಭಾಷೆಗ ಇಂದ್ ನಾಶದ ಕಡೆಗೆ ಎತ್ತಿಟು"ತ ಹೇಳ್ದೊ.

ಇಂದ್ ಬಾಳಷ್ಟ್ ಸಣ್ಣ ಸಮುದಾಯಗ ತಮ್ಮ ಮೇಲ್ವರ್ಗದ ಪ್ರಭಾವಕ್ಕೆ ಒಳಗಾಗ್ತಾ ಉಟ್ಟು. ಅದರ ಪರಿಣಾಮ ಅವರ ಭಾಷೆ ಕಣ್ಮರೆ ಆಗ್ತಾ ಉಟ್ಟು. ಕೊಡಗು ಸೇರ್ದಂಗೆ ಹಲವು ಪ್ರದೇಶಗಳ್‌ಲಿ ಇಂಥಾ ಸ್ಥಿತಿ ಕಂಡ್ ಬರ‍್ತುಟ್ಟು. ಇದ್ ಸಣ್ಣ ಸಮುದಾಯದ ಭಾಷೆಗೆ ಅಪಾಯ ಆದೆ. ಇದರ ತಡೆಗಟ್ಟಿ ಸಣ್ಣ ಭಾಷೆಗಳ ಉಳಿಸಿಕೊಳ್ಳೊಕುತಾದರೆ ಸರಕಾರ ತುರ್ತು ಕ್ರಮಗಳ್ನ ತಕೊಂಬೊಕು. ಇಂಥಾ ಸಣ್ಣ ಭಾಷೆಗಳ ಗುರುತಿಸಿ ಅವುಗಳ ರಕ್ಷಣೆಗೆ ಪ್ರತ್ಯೇಕ ಆದ ಅಕಾಡೆಮಿನ ಸ್ಥಾಪನೆ ಮಾಡೊಕು. ಇಲ್ಲದಿದ್ದರೆ ಇನ್ನ್ ಕೆಲವೇ ದಿನಗಳ್‌ಲಿ ಇಂತಹ ಭಾಷೆ ಇತ್ತ್‌ತ ಹೇಳಕಷ್ಟತ ಹೇಳ್ದೊ.

ಹಿಂದೆಂದ ನಮ್ಮ ಮೇಲೆ ಸಂಸ್ಕೃತ, ಪರ್ಶಿಯನ್ ಮತ್ತೆ ಇಂಗ್ಲೀಷ್ ಭಾಷೆಯ ಒತ್ತಡ ಉಟ್ಟು. ಅವೆಲ್ಲ ಆಳುವ ವರ್ಗದ ಭಾಷೆ ಆಗಿದ್ದ್ ಬಾಕಿಯವರ ಶೋಷಣೆ ಮಾಡಿಕಂಡ್ ಬಂದುಟು. ನಾವ್ ಆಂಗ್ಲರ ಆಳ್ವಿಕೆಲಿ ಗುಲಾಮಗಿರಿಗೆ ಸೇರಿದ್ದೊ. ಅವು ಹೋದ ಮೇಲೆ ನಮ್ಮವರ ಭಾಷೆನ ಬೆಳ್ಸಿಕೆ ಮುಂದಾಗದೆ ಆಳುವ ವರ್ಗವಾಗಿ ಅದೇ ಭಾಷೆನ ಅನುಕರಿಸಿ ಬಾಕಿದ್ದವರ‍್ನ ಶೋಷಣೆಗೆ ಒಳಪಡಿಸಿದೊ. ಅದರ ಪರಿಣಾಮ ಎಲ್ಲಾ ಭಾರತೀಯ ಭಾಷೆ ಮೇಲೆ ಆಳುವ ವರ್ಗದ ಭಾಷೆಯ ಒತ್ತಡ ವಿಪರೀತ ಆಗುಟು. ಅವ್ವ ಭಾಷೆಲಿ ಶಿಕ್ಷಣ ಕೊಡೊಕುತ್ತೇಳುವ ಹೋರಾಟ ಮತ್ತೆ ಅಭಿಪ್ರಾಯಕ್ಕೆ ಕೂಡ ಹಿನ್ನಡೆ ಆಗುಟು. ಇದು ಸನ ಸ್ಥಳೀಯ ಭಾಷೆಗಳ ಅವನತಿಗೆ ತಳ್ಳುತ ಉಟ್ಟುತ ಅಭಿಪ್ರಾಯಪಟ್ಟೊ.

ಆಳುವ ವರ್ಗದ ಭಾಷೆಯ ವ್ಯಾಮೋಹಂದ ಹಾಗೂ ನಮ್ಮ ಮಕ್ಕ ಕೂಡ ಇದೇ ವರ್ಗದವು ಆಕುತ್ತೇಳುವ ಆಸೆಂದ ಪೋಷಕರ್ ಮಕ್ಕಳ ಮೇಲೆ ಒತ್ತಡ ಹಾಕ್‌ತಾ ಒಳೊ. **ಒತ್ತಡಂದ ಕಲಿಯುವ ಎಲ್ಲಾ ಭಾಷೆ ಮಕ್ಕಳಿಗೆ ಕಬ್ಬಿಣದ**

ಕಡ್ಲೆ ಆಗ್ತಾ ಉಟ್ಟು. ಅವ್ವ ಭಾಷೆಲಿ ಕಲಿವ ಒಂದ್ ಕುಸಿ ಅವ್ಕೆ ಸಿಕ್ತಾ ಇಲ್ಲೆತ ವಿಷಾದಿಸಿದೊ.

ಇಂದ್ ಅಕಾಡೆಮಿಗ ತಮ್ಮ ಜಾತಿ, ಧರ್ಮದ ಚೌಕಟ್ಟ್‌ಂದ ಹೊರಗೆ ಬರೊಕು. ತಮ್ಮ ಸುತ್ತ ಕಟ್ಟಿಕಂಡ ಇಂತಹ ಗೋಡೆಗಳ ತೆಗೆಯೊಕು. ನಿರ್ಲಕ್ಷಿತ ಭಾಷೆಗಳ ಬೆಂಬಲಕೆ ನಿಲ್ಲೊಕು. ಭಾಷೆಗಳ ರಕ್ಷಣೆಗೆ ವೈಜ್ಞಾನಿಕ ನೆಲೆಗಟ್ಟ್‌ಲಿ ಕ್ರಮ ತಕೊಣೊಕುತ ಹೇಳ್ದೊ.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಅರೆಭಾಷೆ ಅಕಾಡೆಮಿ ಅಧ್ಯಕ್ಷ ಪಿ.ಸಿ. ಜಯರಾಮನವು ಮಾತಾಡಿ "ವಿದ್ಯಾರ್ಥಿಗಳ್‌ಲಿ ನಾವು ಸಾಹಿತ್ಯದ ಅಭಿರುಚಿ ಮೂಡಿಸಿರೆ ಮಾತ್ರ ಇಂಥಾ ಚಟುವಟಿಕೆ ಮುಂದುವರೆಕೆ ಸಾಧ್ಯ. ಆದರೆ ಇಂದ್‌ನ ಪೀಳಿಗೆಗೆ ಇದರ್‌ಲಿ ಆಸಕ್ತಿ ಕಮ್ಮಿಯಾಗ್ತಾ ಉಟ್ಟುತ ಹೇಳ್ದೊ.

ಸಂವಾದ ಕಾರ್ಯಕ್ರಮ ಅರ್ಥಪೂರ್ಣ ಆಗಿ ನಡ್ತ್. ಕಸ್ತೂರಿ ಗೋವಿಂದಮ್ಮಯ್ಯ, ನೆರವಂಡ ಉಮೇಶ್, ಅಬ್ದುಲ್ಲಾ ಮಡಿಕೇರಿ, ಪುದಿಯನೆರವನೆ ರೇವತಿ ರಮೇಶ್, ಲೋಕನಾಥ್ ಅಮೆಚೂರು, ಆಂಗೀರ ಕುಸುಮ್, ಅಲ್ಲಾರಂಡ ವಿಠಲ್ ನಂಜಪ್ಪ, ಜಿ.ಟಿ. ರಾಘವೇಂದ್ರ, ಪಿ.ಎಸ್.ವೈಲೇಶ್ ಮುಂತಾದವು ಸಂವಾದಲಿ ಪ್ರಶ್ನೆ ಕೇಳ್ದೊ. ಸಾಹಿತಿಗಳಾದ ಅಬ್ದುಲ್ ರಶೀದ್, ಎಂ.ಎ. ಶಶಿಕಲಾ ಗೌಡ, ಬಾರಿಯಂಡ ಜೋಯಪ್ಪ, ನಾಗೇಶ್ ಕಾಲೂರು, ಬಿ.ಎ. ಷಂಶುದ್ದೀನ್ ಇವೆಲ್ಲ ಉತ್ತರ ಕೊಟ್ಟೊ.

ಕಾರ್ಯಕ್ರಮಲಿ ಕೊಡವ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಪೆಮ್ಮಂಡ ಕೆ. ಪೊನ್ನಪ್ಪ, ಸದಸ್ಯರಾದ ತೋರೆರ ಮುದ್ದಯ್ಯ, ಉಮೇಶ ಕೇಚಮಯ್ಯ, ಬಾಲಕೃಷ್ಣ ಮನ್ನಕಮನೆ, ಗಣಪತಿ ಬೆಳ್ಳಿಯಪ್ಪ, ಬೊಳ್ಳಜಿರ ಅಯ್ಯಪ್ಪ, ಅಮ್ಮಣಿಚಂಡ ಪ್ರವೀಣ್ ಚಂಗಪ್ಪ, ಸುಳ್ಳಿಮಾಡ ಭವಾನಿ, ಹಂಚೆಟ್ಟಿರ ಫ್ಯಾನ್ಸಿ ಮುತ್ತಣ್ಣ, ಹಂಚೆಟ್ಟಿರ ಮನು ಮುದ್ದಪ್ಪ, ಅಜ್ಜಿಮಾಡ ಕುಶಾಲಪ್ಪ, ಸೂರಜ್, ಟಾಟು ಮೊಣ್ಣಪ್ಪ, ಕುಡಿಯರ ಶಾರದ, ಅರೆಭಾಷೆ ಅಕಾಡೆಮಿ ಸದಸ್ಯರಾದ ಕಾನೆಹಿತ್ಲು ಮೊಣ್ಣಪ್ಪ, ಪ್ರಸನ್ನ ಕುಂಬಗೌಡನ, ಬಿ.ಡಿ. ದೇವರಾಜ್, ಎಂ. ಹೆಚ್. ಸುರೇಶ್, ದಿನೇಶ್ ಹಾಲೆಮಜಲು, ಚಿದಾನಂದ ಬೈಲಾಡಿ, ಎ.ಕೆ. ಹಿಮಕರ, ಕೊಡಗು ಜಿಲ್ಲಾ ಲೇಖಕ ಕಲಾವಿದರ ಬಳಗದ ಅಧ್ಯಕ್ಷ ಕೇಶವ್ ಕಾಮತ್, ಅಲ್ಲದೆ ಭಾಷಾಭಿಮಾನಿಗ ಸಭೆಲಿದ್ದೊ.

ಕೊಡವ ಅಕಾಡೆಮಿನ ರಮೇಶ್ ಉತ್ತಪ್ಪ, ಲೇಖಕರ ಬಳಗದ ಬಿ.ಎ. ಷಂಶುದ್ದೀನ್, ಅರೆಭಾಷೆ ಅಕಾಡೆಮಿನ ಕಡ್ಲೆರ ತುಳಸಿ ಮೋಹನ್ ಮತ್ತೆ ಬಾರಿಯಂಡ ಜೋಯಪ್ಪ ಇವೆಲ್ಲ ಕಾರ್ಯಕ್ರಮದ ಸಂಚಾಲಕರಾಗಿದ್ದ್ ಕಾರ್ಯಕ್ರಮನ ಪೊರ್ಲಾಗಿ ನಡ್ಸಿಕೊಟ್ಟೊ..




24–06–2018ರಂದ್ ನಡ್ದ ಸಾಹಿತ್ಯ ಶಿಬಿರ ಮತ್ತೆ ಸಂವಾದ ಕಾರ್ಯಕ್ರಮಲಿ
ವೇದಿಕೆಲಿರುವ ಗಣ್ಯರ್.



24–06–2018ರಂದ್ ನಡ್ದ ಸಾಹಿತ್ಯ ಶಿಬಿರ ಮತ್ತೆ ಸಂವಾದ ಕಾರ್ಯಕ್ರಮಲಿ
ಸಭೆನ ಉದ್ದೇಶಿಸಿ ಅಧ್ಯಕ್ಷರಾದ ಶ್ರೀ ಪಿ.ಸಿ. ಜಯರಾಮನವು ಮಾತಾಡ್ತಿರ್ದು.

# ಜಿಲ್ಲಾ ಮಟ್ಟದ ಆಟಿ ನಾಟಿ ಕೂಡು ಕೂಟ

22-07-2018 ರ ಆಯ್ತವಾರದಂದ್ ಮಡಿಕೇರಿ ಹತ್ರದ ದೇವಸ್ತೂರು ಗ್ರಾಮಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಮತ್ತೆ ಕುಕ್ಕೇರ ಕುಟುಂಬದ ವತಿಂದ ಕೆಸ್ರ್‌ಗದ್ದೆ ಕ್ರೀಡಾಕೂಟ ನಡ್ತ್. ಐದ್ ವರ್ಷದ ಒಳಗೆನ ಮಕ್ಕಳ್‌ಂದ ಹಿಡ್ದ್ ವಯೋವೃದ್ಧರವರೆಗಿನವುಕೆಲ್ಲಾ ಸ್ಪರ್ಧೆ ಇತ್ತ್.

ಎರಡ್ ಕಡೆ ಉದೋಕ್ದೆ ಎದ್ದ್ ನಿತ್ತ ಬೆಟ್ಟ ಸಾಲ್. ನಡೂಲಿ ಪ್ರಶಾಂತವಾಗಿ ಆದರೆ ಅಷ್ಟೇ ಗಂಭೀರವಾಗಿ ತುಂಬಿ ಹರೀತಿದ್ದ ಕಾಲೂರು ಹೊಳೆ. ಆ ಹೊಳೆ ಕರೆಲಿ ಕುಕ್ಕೇರ ಪಳಂಗಪ್ಪನವರ ಗದ್ದೆ. ಪಡು ದಿಕ್ಕ್‌ಂದ ವಾರೆ ಆಗಿ ಎಡೆಬಿಡದಂಗೆ ಸೊರಿತಿದ್ದ ಪುಷ್ಯ ಮಳೆ. ಆ ಮಳೆಗೆ ಸಂಗಾತಿಯಾಗಿದ್ದ ಗಾಳಿ. ಮಳೆ ಗಾಳಿ ನಾವ್ಗೆ ಯಾವ ಲೆಕ್ಕತ್ತೇಳುವಂಗೆ ಹರದ್ ಬಂದ ಜನ ಪ್ರವಾಹ! ಬಂದವುಕೆ ಬಂದಂಗೆ ಬೆಚ್ಚ ಬೆಚ್ಚ ಉಪ್ಪಿಟ್, ಕೇಸರಿ ಬಾತ್, ಹಬೆಯಾಡ್‌ತಿದ್ದ ಕಾಪಿ. ಅಷ್ಟೊತ್ತಿಗೆ ಹೃನ್ಮನಕೆ ಪುಳಕವಾಗುವಂತ 'ಕೊಡಗ್‌ನ ಸಿರಿದೇವಾ ಮಾದೂರಪ್ಪ'ತ್ತೇಳುವ ಸುಮಧುರ ಭಕ್ತಿ ಸಂಗೀತ...

ಕಾರ್ಯಕ್ರಮದ ಸುರೂಗೆ ಕುಕ್ಕೇರ ಕುಟುಂಬದ ಪಟ್ಟೆದಾರ ಹಿರಿಯರಾದ ತಮ್ಮಯ್ಯನವು ದೀಪ ಹೋಸಿ ಕಾರ್ಯಕ್ರಮನ ಉದ್ಘಾಟನೆ ಮಾಡ್ದೊ. ಅಕಾಡೆಮಿ ಅಧ್ಯಕ್ಷರಾದ ಪಿ.ಸಿ. ಜಯರಾಮನವು ಅಧ್ಯಕ್ಷತೆ ವಹಿಸಿ ಬಂದವುಕೆ ಮತ್ತೆ ಸ್ಪರ್ಧಾಳ್‌ಗಳಿಗೆ ಶುಭಕೋರ್ದೊ. ಅಷ್ಟೇ ಅಲ್ಲ, ಗದ್ದೆಗಿಳ್ದ್ ವಾಲಿಬಾಲ್ ಆಟಕ್ಕೆ ಚಾಲನೆ ಕೊಟ್ಟೊ. ಅಕಾಡೆಮಿನ ಸದಸ್ಯರೂ ಅವರೊಟ್ಟಿಗಿದ್ದ್ ಸಹಕರಿಸಿದೊ.

ಕಾಳ್ ಹೆರ್ಕುದು, ಓಟ, ವಾಲಿಬಾಲ್, ಥ್ರೋಬಾಲ್, ಹಗ್ಗಜಗ್ಗಾಟ, ಹಗೆಕೀಳ್ದು, ನಾಟಿ ನಡ್ದು, ಗಂಡ ಹೆಣ್ಣ್‌ನ ಚೀಲಲಿ ಕೂರ್‌ಸಿಕಂಡ್ ಕೆಸ್ರ್ ಗದ್ದೆಲಿ ಗೋರ್ ಗೋರ್‌ತ ಎಳೆದು, ಅಂಬುಗಾಯಿ, ಹಿಂದೆ ನಡಿಗೆ ಹಿಂಗೆ ಒಂದರ ಮೇಲೊಂದ್ ಇದ್ದ ಸ್ಪರ್ಧೆಗ ನೆರ್ದ ಜನಕೆ ಕುಸಿಕೊಟ್ಟತ್. ಬೊಳ್ಪುಂದ ಸುರಾದ ಕಾರ್ಯಕ್ರಮ ಹಿಂಬೊತ್ತ್ ಏಳ್‌ಗಂಟೆಮುಟ್ಟ ನಡ್ತ್. ಹಗ್ಗ ಜಗ್ಗಾಟ ಆಕನಂತೂ ಆ ಕತ್ತಲೆಲಿ ಮೊಬೈಲ್ ಬೆಳ್ಕ್ ಹಾಕಂಡ್ ರೆಡ್ಡ್ ಟೇಪ್‌ನ ನೋಡ್ತಾ ಇದ್ದೊ! ಮೇಲೆಂದ ಮಳೆ, ಅಡ್ಡಂದ ಗಾಳಿ, ಕೆಳಗೆಲ್ಲಾ ಕೆಸ್ರ್, ಮೈಪೂರ ಚೆಂಡಿ... ಗದ್ದೆ ಒಳಗೆ ಅಡ್ಡಡ್ಡ ಮಲ್ಕಂಡ್ ಹಗ್ಗನ ಎಳ್ದಾಡ್ತಿದ್ದ ಆಟ, ಆಟ ಅಲ್ಲ ಅದ್ ನಾ ಕೊಡ್ಲೆ, ನೀ ಬುಡ್ಲೆತ್ತೇಳುವ ಹಠ! ಹೆಣ್ಮಕ್ಕಳ್ಲೂ ಅಷ್ಟೇ. ಅದೇ ರೀತಿಯ ಹಠ. ಕಡೆಗೆ ಓ! ಗೆದ್ದೊತ್ತೇಳುವ ಉದ್ಗಾರ.. ರೋಮಾಂಚನ ಕ್ಷಣ. ದೇವಸ್ತೂರ್ ಜನ ಆ ದಿನನ, ಆ ಗದ್ದೆನ, ಆ ಕ್ಷಣನ ಕುಣ್ತುಂಬಿಕಂಡೊ. ಇತಿಹಾಸನ ಸೃಷ್ಟಿ ಮಾಡಿಕೆ ಅವಕಾಶ ಮಾಡಿಕೊಟ್ಟ ಕುಕ್ಕೇರ ಕುಂಟುಬಕ್ಕೆ ಧನ್ಯವಾದಗ.

**ಆಕೀರಿ ಜಂಬರ :** ಹಿಂಬೊತ್ತ್ ನಡ್ದ ಆಕೀರಿ ಜಂಬರದ ನಡುಲಿ ಕೆಸ್ರ್‌ಗದ್ದೆಲಿ ಹಿಂದಕೆ ನಡೆವ ಸ್ಪರ್ಧೆಗೆ ಮಡಿಕೇರಿ ಕ್ಷೇತ್ರದ ಶಾಸಕ ಅಪ್ಪಚ್ಚು ರಂಜನ್‌ನವು, ಅಂಬುಗಾಯಿ ಸ್ಪರ್ಧೆಗೆ ವೀರಾಜಪೇಟೆ ಕ್ಷೇತ್ರದ ಶಾಸಕರಾದ ಕೆ.ಜಿ.

ಬೋಪಯ್ಯನವು ಚಾಲನೆ ಕೊಟ್ಟೊ.

ಶಾಸಕ ರಂಜನ್‌ನವು ಮಾತಾಡಿ ಹಿಂದೆ ಎಲ್ಲವೂ ನಾಟಿ ಕೃಷಿ ಮಾಡಿ ಮುಂಗಾರ್‌ಲಿ ಪ್ರತಿ ಕುಟುಂಬಲಿ ದೊಡ್ಡ ಗದ್ದೆ ಓಟದೊಂದಿಗೆ ಕ್ರೀಡಾ ಸ್ಫೂರ್ತಿನ ಮೆರೆತಿದ್ದೊ. ಅಂತಹ ಪರಂಪರೆನ ಉಳ್ಸಿಕಂಬೊಕುತ ಕರೆಕೊಟ್ಟೊ. ಅರೆಭಾಷೆ ಅಕಾಡೆಮಿ ಆ ನಿಟ್ಟ್‌ಲಿ ಚಟುವಟಿಕೆ ಮಾಡ್ತಾ ಇರ್ದು ಕುಸಿನ ವಿಚಾರತ ಶ್ಲಾಘಿಸಿದೊ.

ಶಾಸಕ ಕೆ.ಜಿ. ಬೋಪಯ್ಯನವು ಮಾತಾಡಿ ಭಾಷೆ, ಸಂಸ್ಕೃತಿ, ಜನಾಂಗಗಳ ಏಳಿಗೆಗಾಗಿ ಶ್ರಮಿಸ್ತಿರುವ ಕೊಡವ ಸಾಹಿತ್ಯ ಅಕಾಡೆಮಿ ಹಾಗೂ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಗಳ ಬೆಳವಣಿಗೆಗೆ ಎಲ್ಲಾ ರೀತಿ ಸಹಕಾರ ಕೊಟ್ಟವೆತ ಭರವಸೆ ಕೊಟ್ಟೊ. ಒಳ್ಳೊಳ್ಳ ಕಾರ್ಯಕ್ರಮಗಳ್ನ ಕರ್ನಾಟಕದ ಗಡಿ ಆಚೆಗೂ ಕೊಡಿತ ಹೇಳ್ದೊ.

ಕೊಡಗ್‌ನವೇ ಆದ ಅದರ್ಲೂ ದೇವಸ್ತೂರು ತವರೂರಾಗಿರುವ ಕೋಲಾರ ಜಿಲ್ಲೆಯ ಅಬ್ಕಾರಿ ಇಲಾಕೆನ ಜಿಲ್ಲಾಧಿಕಾರಿ ಆಗಿರುವ ನಂಗಾರು ಸುಮಿತ ಲಿಂಗರಾಜುನವು ಮಾತಾಡಿ ಜನಾಂಗದ ಮಕ್ಕ ಉನ್ನತ ಶಿಕ್ಷಣ ಪಡ್ಕಂಡ್ ಒಳ್ಳ ಸ್ಥಾನಕ್ಕೇರಕುತ ಕರೆಕೊಟ್ಟೊ. ತವರೂರಿಗೆ ಕರ್ಸಿ ಮುಖ್ಯ ನಂಟತಿತ ಗೌರವ ಕೊಟ್ಟದಕ್ಕೆ ತುಂಬಾ ಕುಸಿಪಟ್ಟೊ.

ಅಕಾಡೆಮಿ ಅಧ್ಯಕ್ಷ ಪಿ.ಸಿ. ಜಯರಾಮನವು ಮಾತಾಡಿ ಶಾಸಕರ್, ಸರಕಾರದ ಸಹಕಾರಂದ ಇನ್ನೂ ಉತ್ತಮ ಕಾರ್ಯಕ್ರಮಗಳ್ನ ಆಯೋಜನೆ ಮಾಡಿವೆತ ಆಶ್ವಾಸನೆ ಕೊಟ್ಟೊ. ತಾ. ಪಂಚಾಯಿತಿ ಸದಸ್ಯ ರಾಯ್‌ತಮ್ಮಯ್ಯ, ಗಾಳಿಬೀಡು ಪಂಚಾಯ್ತಿ ಅಧ್ಯಕ್ಷ ಸುಭಾಷ್ ಸೋಮಯ್ಯ, ಸದಸ್ಯ ಪ್ರದೀಪ್, ಕುಕ್ಕೇರ ಲಕ್ಷ್ಮಣ, ಕುಂಬಗೌಡನ ಅರವಿಂದ, ಮೋಣಪ್ಪಗೌಡ, ಅಕಾಡೆಮಿನ ಮಾಜಿ ಸದಸ್ಯರಾದ ತುಂತಜೆ ವೆಂಕಟೇಶ್, ಕುಡೆಕಲ್ ಸಂತೋಷ್, ಹಾಲಿ ಸದಸ್ಯರಾದ ಕೆ.ಟಿ. ವಿಶ್ವನಾಥ್, ಮಾಧವ ಗೌಡ, ಎಂ. ಎಚ್. ಸುರೇಶ್, ತಿರುಮಲೇಶ್ವರಿ, ಬೇಕಲ್ ದೇವರಾಜ್ ಉಪಸ್ಥಿತರಿದ್ದೊ.

ಉದ್ಘಾಟನೆ ಮತ್ತೆ ಆಕೀರಿ ಸಮಾರಂಭದ ಸುರೂಲಿ ಚೊಕ್ಕಾಡಿ ಪ್ರೇಮ ರಾಘವಯ್ಯನವು ಪ್ರಾರ್ಥನೆ ಮಾಡ್ದೊ. ಅಕಾಡೆಮಿ ಸದಸ್ಯರಾದ ಕಾನೆಹಿತ್ಲು ಮೊಣ್ಣಪ್ಪನವು ಸ್ವಾಗತಿಸಿದೊ.

ಪಟ್ಟಡ ಶಿವಕುಮಾರನವು ಅಲ್ಲಲ್ಲಿ ತಮಾಸೆ ಮಾಡಿಕಂಡ್ ತುಂಬಾ ಲಾಯ್ಕಾಗಿ ನಿರೂಪಣೆ ಮಾಡ್ದೊ. ಅಕಾಡೆಮಿ ಸದಸ್ಯೆ ಕಡ್ಲೇರ ತುಳಸಿ ಮೋಹನ್‌ನವು ಸಹಕರಿಸಿದೊ. ಅಕಾಡೆಮಿ ಸದಸ್ಯ ಬಾರಿಯಂಡ ಜೋಯಪ್ಪನವು ವಂದಿಸಿದೊ. ಕಾರ್ಯಕ್ರಮದ ಸಂಚಾಲಕರಾಗಿ ಕುಂಬಗೌಡನ ಪ್ರಸನ್ನ ಮತ್ತೆ ಕಾನೆಹಿತ್ಲು ಮೊಣ್ಣಪ್ಪನವು ಒಳ್ಳ ರೀತಿಲಿ ಕಾರ್ಯನಿರ್ವಹಿಸಿ ಸಮಾರಂಭನ ಯಶಸ್ವಿಗೊಳಿಸಿದೊ. ರಂಜಿತ್, ಸೋನಾಜಿತ್, ತೇಜಸ್, ಕುಕ್ಕೇರ ಶ್ರೀಮತಿ ಶೈಲ ಮತ್ತೆ ಕೋಳುಮುಡಿಯನ ಶ್ರೀಮತಿ ಅನಂತನವು ತೀರ್ಪುಗಾರರಾಗಿ ಕಾರ್ಯ ನೀಸಿದೊ.



22-07-2018 ರಂದ್ ದೇವಸ್ತೂರು ಗ್ರಾಮದ ಕುಕ್ಕೇರ ಕುಟುಂಬದ
ಗದ್ದೆಲಿ ನಡ್ಡ ಜಿಲ್ಲಾ ಮಟ್ಟದ ಆಟಿ ನಾಟಿ ಕೂಡು ಕೂಟದ ಓಟದ ಸ್ಪರ್ಧೆ



22-07-2018 ರಂದ್ ದೇವಸ್ತೂರು ಗ್ರಾಮದ ಕುಕ್ಕೇರ ಕುಟುಂಬದ
ಗದ್ದೆಲಿ ನಡ್ಡ ಜಿಲ್ಲಾ ಮಟ್ಟದ ಆಟಿ ನಾಟಿ ಕೂಡು ಕೂಟದ ಅಗೆ ತೆಗೆವ ಸ್ಪರ್ಧೆ.



22-07-2018 ರಂದ್ ದೇವಸ್ತೂರು ಗ್ರಾಮದ ಕುಕ್ಕೇರ ಕುಟುಂಬದ ಗದ್ದೆಲಿ
ನಡ್ಡ ಜಿಲ್ಲಾ ಮಟ್ಟದ ಆಟಿ ನಾಟಿ ಕೂಡು ಕೂಟದ ಓಟದ ಸ್ಪರ್ಧೆಲಿ ಮಕ್ಕ.



22-07-2018 ರಂದ್ ದೇವಸ್ತೂರು ಗ್ರಾಮದ ಕುಕ್ಕೇರ ಕುಟುಂಬದ
ಗದ್ದೆಲಿ ನಡ್ಡ ಜಿಲ್ಲಾ ಮಟ್ಟದ ಆಟಿ ನಾಟಿ ಕೂಡು ಕೂಟದ ಹಗ್ಗಜಗ್ಗಾಟ ಸ್ಪರ್ಧೆ.

# ಚಿತ್ರಕ್ಕೆ ಕವನದ ಮೆರ್‌ಗ್ ಕೊಡಿ.



ನಿಮ್ಮ ಕವನ 20 ಸಾಲ್ ಮೀರದಂಗಿರ್‌ಲಿ.
ಸೆಪ್ಟೆಂಬರ್ 5 ರ ಒಳಗೆ ನಿಮ್ಮ ಕವನ ನಮ್ಮ ಕೈ ಸೇರ್‌ಲಿ.
ಸಂಪಾದಕರು, 'ಹಿಂಗಾರ' ತ್ರೈಮಾಸಿಕ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
1ನೇ ಮಹಡಿ, ಕಾಫಿಕೃಪಾ, ರಾಜಾಸೀಟ್ ರಸ್ತೆ,
ಮಡಿಕೇರಿ – 571201, ಕೊಡಗು ಜಿಲ್ಲೆ.
ಇ–ಮೇಲ್ – **arebaseacademy@gmail.com**

## ಹಿಂಗಾರಕೆ ನೀವೂ ಬರೆನಿ

ಹಿಂಗಾರ ತ್ರೈಮಾಸಿಕ ಪತ್ರಿಕೆಗೆ ನೀವು ಕತೆ, ಪದ್ಯ, ಲೇಖನ, ಅಡುಗೆ, ರಂಗೋಲಿ, ಅನುಭವ, ಗಾದೆ, ಪದಕೋಶ ಇಂತದರೆಲ್ಲ ಬರ್ದ್ ಕಳ್ಸಿ. ಪ್ರಕಟಣೆಗೆ ಆಯ್ಕೆ ಆದ ಸಾಹಿತ್ಯನ ಪ್ರಕಟಿಸಿವೆ. ಹೊಸದಾಗಿ ಬರೆವು ಬರ್ದರ ಒಮ್ಮೆ, ಇಮ್ಮೆ, ಮತ್ತೊಮ್ಮೆ ಓದಿ ತಿದ್ದಿ ಬರೆನಿ. ಮನ್ಸಿಗೆ 'ಈಗ ಸರಿ ಆತ್'ತ ಆದ ಮೇಲೆ ಫುಲ್‌ಸ್ಕೇಪ್ ಹಾಳೆಲಿ ಒಂದೇ ಕಡೆ ಬರೆನಿ. ಮಾರ್ಜಿನ್ ಬುಟ್ಟ್ ಬರೆನಿ. ಬರವಣಿಗೆ ನಿಮ್ಮ ಸೊಂತದ್ದಾಗಿರ್‌ಲಿ. ಅದೇ ಹಾಳೆಲಿ ನಿಮ್ಮ ಪೂರ್ತಿ ಹೆಸ್ರ್, ವಿಳಾಸ, ದೂರವಾಣಿ ಸಂಖ್ಯೆನ ಬರೆನಿ.

ಹಿಂಗಾರದ ವಿಳಾಸ : **ಸಂಪಾದಕರ್**
ಹಿಂಗಾರ ತ್ರೈಮಾಸಿಕ ಪತ್ರಿಕೆ
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
1ನೇ ಮಹಡಿ, ಕಾಫಿಕೃಪಾ, ರಾಜಾಸೀಟ್ ರಸ್ತೆ, ಮಡಿಕೇರಿ – 571 201
ಕೊಡಗು ಜಿಲ್ಲೆ
ಇ–ಮೇಲ್ : arebaseacademy@gamil.com
ವೆಬ್‌ಸೈಟ್ : www.arebhasheacademy.com
ದೂರವಾಣಿ : 08272 223055

## ಅಕಾಡೆಮಿದ್ ಪ್ರಕಟಣೆಗ

1 ಸರ್ಮಾಲೆ : ಎಂ.ಜಿ. ಕಾವೇರಮ್ಮ
2 ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ. ಕಾವೇರಮ್ಮ
3 ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ
4 ಕುಂಕುಮ : ಪೂಜಾರೀರ ಜಿ. ಮಾದಪ್ಪ
5 ಬೊಲ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ. ಮುಡೂರು
6 ಬೇಟೆನ ಬಿರ್ಸ– ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ
7 ಬೆಳ್ಳಿಮುಷ್ಟಿ : ಕಟ್ರತನ ಕೆ. ಬೆಳ್ಯಪ್ಪ
8 ತೋರಣ : ಬಾರಿಯಂಡ ಆರ್. ಜೋಯಪ್ಪ
9 ಬೊಲ್ಪು : ಲೋಕೇಶ್ ಕುಂಚಡ್ಕ
10 ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯಣ್ಣ
11 ನೆಂಪುಗಳ ರಂಗೋಲಿ : ಎಂ.ಜಿ. ಕಾವೇರಮ್ಮ
12 ಹೊಸ ಬೊದ್ಕ್ : ಉದಯಕುಮಾರಿ, ಚೆಂಬು.
13 ಸಂಸ್ಕೃತಿ ಸಂಪತ್ತ್ : ಅರೆಭಾಷೆ ಸಂಸ್ಕೃತಿ ಪರಿಚಯ
14 ಬೆಳ್ಳಿ ಚುಕ್ಕೆಗ : ಬೈತಡ್ಕ ಜಾನಕಿ ಬೆಳ್ಯಪ್ಪ
15 ಅನುಭವಧಾರೆ : ಹೊದ್ದೆಟ್ಟಿ ಭವಾನಿಶಂಕರ
16 ರುಚಿ : ಅರೆಭಾಷೆ ಸಂಪ್ರದಾಯದ ಅಡಿಗೆ.
17 ಸಫಲ : ಅರೆಭಾಷೆ ಅಕಾಡೆಮಿಯ 2ನೇ ಸಮಿತಿಯ 3 ವರ್ಷಗಳ ಸಾಧನೆ.




ಶ್ರೀಮತಿ ಪ್ರತಿಭಾ ನಂದಕುಮಾರ್‌ನವು ಮಾತಾಡ್ತಿರ್ದು



ಶ್ರೀ ಕೋಡಿ ಕುಶಾಲಪ್ಪ ಗೌಡ ಅವು ಕಂಡ್‌ಹಿಡ್ದ ಅರೆಬಾಸೆ ಲಿಪಿನ ಅವೆ ಬರೀತಿರ್ದು



ಮಡಿಕೇರಿಲಿ ನಡ್ದ ಸಾಹಿತ್ಯ ಶಿಬಿರ ಮತ್ತೆ ಸಂವಾದ ಜಂಬರನ ಅರೆಬಾಸೆ ಅಕಾಡೆಮಿ ಅಧ್ಯಕ್ಷ
ಪಿ.ಸಿ. ಜಯರಾಮನವು ಉದ್ಘಾಟನೆ ಮಾಡ್ತಿರ್ದು



ಜಿಲ್ಲಾ ಮಟ್ಟದ ಆಟಿ ನಾಟಿ ಕೂಡು ಕೂಟದ ಉದ್ಘಾಟನೆ



ಆಟಿ ನಾಟಿ ಕೂಡು ಕೂಟದ ಜಂಬರ : ಕೆಸರ್ ಗದ್ದೆಲಿ ಹೆಣ್ಮಕ್ಕಳ ಥ್ರೋಬಾಲ್ ಸ್ಪರ್ಧೆ



ಆಟಿ ನಾಟಿ ಕೂಡು ಕೂಟದ ಜಂಬರಲಿ ಮುಖ್ಯ ನೆಟ್ರಾಗಿ ಕೊಂಬಾರನ ಬೋಪಯ್ಯನವು ಮಾತಾಡ್‌ತಿರುದು

HINGARA Arebhashe Quarterly Volume -2, Issue -6
Date: 30.06.2018 Kodagu KARARB/2016/69571 Price : 20/- Pages : 84




ಹಿರಿಯ ಸಾಹಿತಿ ಪ್ರೊ|| ಕೋಡಿ ಕುಶಾಲಪ್ಪ ಗೌಡ್ರ್‌ಗೆ ಸನ್ಮಾನ ಮಾಡ್ತಿರುದು

Ptd@Sri Krishna Printers. 94481 35592

Printed by UMARABBA on behalf of Registar, Karnataka Arebhase Samskruthi Mathu Sahitya Academy, and, Published by UMARABBA on behaf of registar of registar Karnataka Arebhashe Samskruthi Mathu Sahitya Acadamy on behalf of KARNATAKA AREBHASE SAMSKRUTHI MATHU SAHITHYA ACADEMI (name of woner) and Printed at SRI KRISHNA COMPUTERS & PRINTERS, Pooja Arcade, Madikeri, Kodagu District. And Published at Karnataka Arebhashe Samskruthi Mathu Sahithya Academy, Coffee Krupa Building, 1st Floor, Raja Seat Road, Madikeri, Kodagu District. Editor : UMARABBA

# ಹಿಂಗಾರ

ಕರ್ನಾಟಕ ಸರ್ಕಾರ

ಅರೆಭಾಷೆ ತ್ರೈಮಾಸಿಕ

ಸಂಪುಟ–2 ಸಂಚಿಕೆ–6 ದಿನಾಂಕ : 30.06.2018 ಕೊಡಗು ರೂ. 20/-

ಏಪ್ರಿಲ್ – ಮೇ – ಜೂನ್



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ